KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಏಪ್ರಿಲ್ ೩೦, ೨೦೦೯ (ವೈಶಾಖ ೧೦, ಶಕ ವರ್ಷ ೧೯೩೧) | ಸಂಚಿಕೆ ೧೮ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಮುಂಡೋಡಿ ಶಿವಾನಂದ, ಹಿಂದಿನ ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಅಮಾನತ್ತಿನ ಅವಧಿಯನ್ನು ಸಕ್ರಮಗೊಳಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಪತ್ರ ನಂ. ಲಾ 42 ಪಿಪಿಇ 96, ದಿನಾಂಕ 15.02.1997
2. ಸರ್ಕಾರದ ಆದೇಶ ನಂ. ಲಾ 161 ಪಿಪಿಇ 96, ದಿನಾಂಕ 03.09.1996.
3. ಸರ್ಕಾರದ ಆದೇಶ ನಂ. ಲಾ 161 ಪಿಪಿಇ 96, ದಿನಾಂಕ 22.09.1997.
4. ಸರ್ಕಾರದ ಆದೇಶ ನಂ. ಒಇ 56 ಪಿಪಿಇ 2006 ದಿನಾಂಕ 03.03.2007.
5. ಮಹಾಲೇಖಪಾಲರ ಪತ್ರ ನಂ. ಜಿಇ13 / ಜೆ3 / 2007–08 / 65, ದಿನಾಂಕ 19.04.2007.
6. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ತಮ್ಮ ಪತ್ರ ನಂ. ಡಿಪಿಎನ್ / ಸಿಶಾ– 1 / 226 / 2006–07, ದಿನಾಂಕ 27.07.2007.

**ಪ್ರಸ್ತಾವನೆ:**

ಶ್ರೀ ಮುಂಡೋಡಿ ಶಿವಾನಂದ ಹಿಂದಿನ ಸಹಾಯಕ ಅಭಿಯೋಗ ನಿರ್ದೇಶಕರು ಅವರು ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ, ಮಂಗಳೂರು ಇಲ್ಲಿ ನಿಯೋಜನೆ ಮೇರೆಗೆ ಕಾನೂನು ಅಧಿಕಾರಿಯಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಕಾರ್ಯದರ್ಶಿ, ಕೆ.ಇ.ಬಿ ಇವರು ಮಾತೃ ಇಲಾಖೆಗೆ ಹಿಂದಿರುಗಿಸಲು ಆದೇಶಿಸಿ, ದಿನಾಂಕ 04.04.1996 ರಿಂದ ಬಿಡುಗಡೆಗೊಳಿಸಲು ಸೂಚಿಸಿದ್ದರು. ಸದರಿ ಅಧಿಕಾರಿಯವರು ಸದರಿ ಆದೇಶದಂತೆ ಬಿಡುಗಡೆ ಹೊಂದದೆ ಸರ್ಕಾರದ ಆದೇಶವನ್ನು ನಿರೀಕ್ಷಿಸಿ, ಸದರಿ ಕಛೇರಿಯಲ್ಲಿಯೇ ದಿನಾಂಕ 27.06.1996 ರವರೆಗೆ ಮುಂದುವರೆದಿರುತ್ತಾರೆ.

ಶ್ರೀ ಮುಂಡೋಡಿ ಶಿವಾನಂದ ಇವರು ಸುಬ್ರಹ್ಮಣ್ಯ ಪೋಲೀಸ್ ಠಾಣೆ ಅಪರಾಧ ಸಂಖ್ಯೆ: 26/96ರಲ್ಲಿ 3ನೇ ಆರೋಪಿಯೆಂದು ನಮೂದಿಸಿದ್ದರಿಂದ, ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ 10ನೇ ನಿಯಮದ (1)(ಬಿ) ಉಪನಿಯಮದಡಿ ಹಾಗೂ ನಿಯಮ (2)(ಎ)ರ ಅಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ದಿನಾಂಕ 28.06.1996ರಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಅಮಾನತ್ತಿನಲ್ಲಿಡಲಾಗಿತ್ತು.

ಮೇಲೆ ಓದಲಾದ (3)ರ ಸರ್ಕಾರದ ಆದೇಶದಲ್ಲಿ ಶ್ರೀ ಮುಂಡೋಡಿ ಶಿವಾನಂದ ಇವರ ವಿರುದ್ಧ ಕ್ರಿಮಿನಲ್ ಮೊಕದ್ದಮೆ / ಇಲಾಖಾ ವಿಚಾರಣೆ ಬಾಕಿ ಇಟ್ಟು re–instate ಮಾಡಿದ್ದು, ಅವರು ದಿನಾಂಕ 24.09.1997ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಗೆ ಎಸ್.ಸಿ. ನಂ. 116/96ರ ಪ್ರಕರಣದಲ್ಲಿ ಜೀವಾವಧಿ ಶಿಕ್ಷೆಯನ್ನು ವಿಧಿಸಲಾಗಿದ್ದು, ಶಿಕ್ಷೆ ವಿಧಿಸಿದ ದಿನಾಂಕದಿಂದ ಅಂದರೆ ದಿನಾಂಕ 3.8.2000ರಿಂದ ಸೇವೆಯಿಂದ ವಜಾ ಮಾಡುವ ವರೆಗಿನ ಅವಧಿಯನ್ನು ಅಂದರೆ ದಿನಾಂಕ 5.10.2001ರವರೆಗೆ ಅಮಾನತ್ತಿನ ಅವಧಿಯೆಂದು ಪರಿಗಣಿಸಲಾಗಿದೆ.

ಮಾನ್ಯ ಸರ್ವೋಚ್ಚ ನ್ಯಾಯಾಲಯವು ಸದರಿಯವರ ಮೇಲಿನ ಆರೋಪವನ್ನು ಖುಲಾಸೆಗೊಳಿಸಿ, ಜೀವಾವಧಿ ಶಿಕ್ಷೆಯಿಂದ ಬಿಡುಗಡೆಗೊಳಿಸಿದ ಕಾರಣ ಶ್ರೀ ಮುಂಡೋಡಿ ಶಿವಾನಂದ ಇವರನ್ನು ವಜಾಗೊಳಿಸಿದ ದಿನಾಂಕ 06.10.2001 ರಿಂದ ಅವರು ವಯೋನಿವೃತ್ತಿ ಹೊಂದುತ್ತಿದ್ದ 30.06.2006ರ ಅವಧಿಯನ್ನು ಮೇಲೆ ಓದಲಾದ (4)ರ ಸರ್ಕಾರದ ಆದೇಶದಲ್ಲಿ ಸಕ್ರಮಗೊಳಿಸಿ, ನಿವೃತ್ತಿ ವೇತನ ಮತ್ತು ಡಿ.ಸಿ.ಆರ್.ಜಿ ಸೌಲಭ್ಯ ಮಾತ್ರ ನೀಡಲು ಸಚಿವ ಸಂಪುಟದ ಅನುಮೋದನೆ ಪಡೆದು ಆದೇಶಿಸಿದೆ.

ಸದರಿ ಅಧಿಕಾರಿಯವರಿಗೆ ಸಂಬಂಧಿಸಿದಂತೆ ದಿನಾಂಕ 05.04.1996 ರಿಂದ 27.06.1996, 28.06.1996 ರಿಂದ 24.09.1997 ಮತ್ತು 03.08.2000 ರಿಂದ 05.10.2001 ರವರೆಗಿನ ಅವಧಿಯನ್ನು ಸಕ್ರಮಗೊಳಿಸುವ ಬಗ್ಗೆ ಮಹಾಲೇಖಪಾಲರು ಮೇಲೆ ಓದಲಾದ (5)ರ ಪತ್ರದಲ್ಲಿ ಕೋರಿರುತ್ತಾರೆ.

ಮೇಲೆ ಓದಲಾದ (6)ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಶ್ರೀ ಮುಂಡೋಡಿ ಶಿವಾನಂದ ಇವರು ಅಮಾನತ್ತಿನಲ್ಲಿದ್ದ ಅವಧಿಯನ್ನು ಕರ್ತವ್ಯದ ಅವಧಿ ಎಂದು ಪರಿಗಣಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ನಂ. ಒಇ 213 ಪಿಪಿಇ 2007, ಬೆಂಗಳೂರು, ದಿನಾಂಕ 05ನೇ ಡಿಸೆಂಬರ್ 2008**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಶ್ರೀ ಮುಂಡೋಡಿ ಶಿವಾನಂದ, ಹಿಂದಿನ ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರು ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿಯಲ್ಲಿ ನಿಯೋಜನೆ ಮೇರೆಗೆ ಕರ್ತವ್ಯ ನಿರ್ವಹಿಸುತ್ತಿದ್ದು, ಸರ್ಕಾರದ ನಿಯೋಜನೆ ವಾಪಸ್ಸು ಆದೇಶ ಬರುವವರೆಗೆ ಕಾಯ್ದು ಅವಧಿ 05.04.1996 ರಿಂದ 27.06.1996, ದಿನಾಂಕ 28.06.1996 ರಿಂದ 24.09.1997ರವರೆಗಿನ ಅಮಾನತ್ತಿನ ಅವಧಿ (ಎರಡೂ ದಿನಗಳು ಸೇರಿ) ಮತ್ತು ಸದರಿ ಅಧಿಕಾರಿಗೆ ಎಸ್.ಸಿ. ನಂ.116/96ರ ಪ್ರಕರಣದಲ್ಲಿ ಜೀವಾವಧಿ ಶಿಕ್ಷೆಯನ್ನು ವಿಧಿಸಲಾಗಿದ್ದು, ಶಿಕ್ಷೆ ವಿಧಿಸಿದ ದಿನಾಂಕದಿಂದ ಅಂದರೆ ದಿನಾಂಕ 3.8.2000ರಿಂದ ಸೇವೆಯಿಂದ ವಜಾ ಮಾಡುವ ವರೆಗಿನ ಅವಧಿಯನ್ನು ಅಂದರೆ ದಿನಾಂಕ 5.10.2001ರವರೆಗೆ ಅಮಾನತ್ತಿನ ಅವಧಿ (ಎರಡೂ ದಿನಗಳು ಸೇರಿ) ಯನ್ನು 1957ರ ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 100(1)(ಬಿ)ರನ್ವಯ ಎಲ್ಲಾ ಉದ್ದೇಶಗಳಿಗೂ ಕರ್ತವ್ಯದ ಅವಧಿ ಎಂಬುದಾಗಿ ಪರಿಗಣಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ರ್. 94 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಡಿ.ಎಂ.ಕಾಮೋಜಿ, ಹಿಂದಿನ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 6ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು, ಇವರ ವೇತನವನ್ನು ಶ್ರೀ ಎಸ್.ಟಿ.ಬಿಕ್ಕಣ್ಣವರ್ ಇವರ ವೇತನಕ್ಕೆ ಸಮಾನಗೊಳಿಸುವ ಕುರಿತು.

**ಓದಲಾಗಿದೆ:**

1. ಸರ್ಕಾರದ ಅಧಿಸೂಚನೆ ಸಂ: ಲಾ 123 ಪಿಪಿಇ 85 (I), ದಿನಾಂಕ: 20.02.1986.
2. ಸದರಿ ಅಧಿಕಾರಿಯವರ ಮನವಿ ದಿನಾಂಕ: 20.05.2005.
3. ಮಹಾಲೇಖಪಾಲರ ಕಛೇರಿಯ ಪತ್ರದ ಸಂ: ಜಿಇ13/ಜ2/2004–05/726, ದಿನಾಂಕ: 04.11.2004
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/72/2004–05, ದಿನಾಂಕ: 21.12.2004.

**ಪ್ರಸ್ತಾವನೆ:**

ಶ್ರೀ ಡಿ.ಎಂ.ಕಾಮೋಜಿ, ಹಿಂದಿನ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 6ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು ಮತ್ತು ಶ್ರೀ ಎಸ್.ಟಿ.ಬಿಕ್ಕಣ್ಣವರ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 10ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು ಇವರುಗಳು ಮೇಲೆ (1)ರಲ್ಲಿ ಓದಲಾದ ದಿನಾಂಕ:20.02.1986ರ ಸರ್ಕಾರದ ಅಧಿಸೂಚನೆಯನ್ವಯ ಕ್ರಮವಾಗಿ ಕ್ರ.ಸಂ:7 ಮತ್ತು ಕ್ರ.ಸಂ:16ರಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿರುತ್ತಾರೆ.

ಮೇಲೆ ಓದಲಾದ (2)ರ ಮನವಿ ಪತ್ರದಲ್ಲಿ ಶ್ರೀ ಡಿ.ಎಂ.ಕಾಮೋಜಿರವರು ದಿನಾಂಕ: 17.02.1998ರಿಂದ ಸದರಿ ಅಧಿಕಾರಿಯ ವೇತನ ಮತ್ತು ಕಿರಿಯ ಸರ್ಕಾರಿ ಅಧಿಕಾರಿಯಾದ ಶ್ರೀ ಎಸ್.ಟಿ.ಬಿಕ್ಕಣ್ಣವರ್‌ರವರ ವೇತನದ ನಡುವೆ ಒಂದು ಹಂತದ ವ್ಯತ್ಯಾಸ ಉಂಟಾಗಿರುತ್ತದೆ. ನಿಯಮಾನುಸಾರ ಹಿರಿಯ ಸರ್ಕಾರಿ ಅಧಿಕಾರಿಯ ವೇತನವನ್ನು ಕಿರಿಯ ಸರ್ಕಾರಿ ನೌಕರರ ವೇತನಕ್ಕೆ ವ್ಯತ್ಯಾಸದ ದಿನಾಂಕದಿಂದ ಸಮಾನಗೊಳಿಸಬಹುದಾಗಿರುತ್ತದೆ. ಆದ್ದರಿಂದ, ದಿನಾಂಕ: 17.02.1998ರಂದು ಅವರ ವೇತನವನ್ನು ರೂ.3000/–ಗಳಿಗೆ ನಿಗಧಿಗೊಳಿಸಿ, ವಾರ್ಷಿಕ ವೇತನ ಬಡ್ತಿಯ ದಿನಾಂಕವಾದ 01.03.98ಕ್ಕೆ ರೂ.3100–00ಗಳಿಗೆ ವೇತನವನ್ನು ನಿಗಧಿ ಪಡಿಸಬೇಕೆಂದು ಸದರಿ ಅಧಿಕಾರಿಯು ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಮಹಾಲೇಖಪಾಲರ ದಿನಾಂಕ:04.11.2004ರ ಪತ್ರದಲ್ಲಿ ದಿನಾಂಕ:18.02.1998ರಂದು ಕಿರಿಯ ಅಧಿಕಾರಿಯಾದ ಶ್ರೀ ಎಸ್.ಟಿ.ಬಿಕ್ಕಣ್ಣವರ್‌ರವರಿಗೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಮುಂಬಡ್ತಿ ದೊರೆತ್ತಿದ್ದರಿಂದ ಅವರ ವೇತನವನ್ನು ರೂ.3000/–ಗಳನ್ನು ನಿಗಧಿ ಪಡಿಸಿರುತ್ತಾರೆ. ದಿನಾಂಕ:01.03.1998ರಂದು ಶ್ರೀ ಡಿ.ಎಂ. ಕಾಮೋಜಿ ಮತ್ತು ಶ್ರೀ ಎಸ್.ಟಿ.ಬಿಕ್ಕಣ್ಣವರ್‌ರವರಿಗೆ ವಾರ್ಷಿಕ ವೇತನ ಬಡ್ತಿಯನ್ನು ನೀಡುವ ಮೂಲಕ ಇವರುಗಳ ವೇತನವನ್ನು ಕ್ರಮವಾಗಿ ರೂ.3000–00ಗಳಿಗೆ ಮತ್ತು ರೂ.3100–00 ಗಳಿಗೆ ನಿಗಧಿ ಪಡಿಸಲಾಗಿರುತ್ತದೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು, ಇವರು ಶ್ರೀ ಡಿ.ಎಂ.ಕಾಮೋಜಿ, ಮತ್ತು ಎಸ್.ಟಿ. ಬಿಕ್ಕಣ್ಣವರ್ ಅವರು ಮೇಲೆ (1)ರಲ್ಲಿ ಓದಲಾದ ದಿನಾಂಕ:20.02.1986ರ ಸರ್ಕಾರ ಅಧಿಸೂಚನೆಯನ್ವಯ ಕ್ರಮವಾಗಿ ಕ್ರ.ಸಂ:7 ಮತ್ತು ಕ್ರ.ಸಂ:16ರಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿರುತ್ತಾರೆ. ದಿನಾಂಕ:1.1.2001ರಲ್ಲಿದ್ದಂತೆ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಜೇಷ್ಠತಾ ಪಟ್ಟಿಯಲ್ಲಿ ಕ್ರಮವಾಗಿ ಕ್ರ.ಸಂ: 51 ಕ್ರ.ಸಂ:57 ಆಗಿರುತ್ತದೆ. ಆದ್ದರಿಂದ, ಶ್ರೀ ಎಸ್.ಟಿ.ಬಿಕ್ಕಣ್ಣವರ್‌ರವರು ಶ್ರೀ ಡಿ.ಎಂ.ಕಾಮೋಜಿಯವರಿಗಿಂತ ಕಿರಿಯ ಸರ್ಕಾರಿ ಅಧಿಕಾರಿಯಾಗಿರುತ್ತಾರೆ. ಕಿರಿಯ ಅಧಿಕಾರಿಯವರಿಗೆ ಆಯ್ಕೆ ಕಾಲಿಕ ವೇತನ ಶ್ರೇಣಿಯ ಬಡ್ತಿಯ ಸಿಕ್ಕಿದ ನಂತರ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಮುಂಬಡ್ತಿ ಸಿಕ್ಕಿರುವುದರಿಂದ, ಹಿರಿಯ ಅಧಿಕಾರಿಯ ವೇತನ ಮತ್ತು ಕಿರಿಯ ಅಧಿಕಾರಿಯ ವೇತನದ ನಡುವೆ ಒಂದು ಹಂತದ ವ್ಯತ್ಯಾಸ ಉಂಟಾಗಿರುತ್ತದೆ. ಸರ್ಕಾರಿ ಆದೇಶ ಸಂ: ಎಫ್‌ಡಿ 60 ಎಸ್‌ಆರ್‌ಎಸ್ 84, ದಿನಾಂಕ:07.11.1984ರ ಅವಕಾಶದನ್ವಯ ಹಿರಿಯ ಸರ್ಕಾರಿ ಅಧಿಕಾರಿಯ ವೇತನವನ್ನು ಕಿರಿಯ ಸರ್ಕಾರಿ ನೌಕರರ ವೇತನಕ್ಕೆ ವ್ಯತ್ಯಾಸದ ದಿನಾಂಕದಿಂದ ಸಮಾನಗೊಳಿಸಬಹುದಾಗಿರುತ್ತದೆ. ಆದ್ದರಿಂದ, ಹಿರಿಯ ಅಧಿಕಾರಿಯಾದ ಶ್ರೀ ಡಿ.ಎಂ.ಕಾಮೋಜಿರವರ ವೇತನವನ್ನು ದಿನಾಂಕ:18.02.1998ರಂದು ರೂ.2900–00 ರಿಂದ ರೂ.3000–00ಗಳಿಗೆ ನಿಗಧಿ ಪಡಿಸಿ, ಕಿರಿಯ ಸರ್ಕಾರಿ ನೌಕರರಾದ ಶ್ರೀ ಎಸ್.ಟಿ.ಬಿಕ್ಕಣ್ಣವರ್, ಅವರ ವೇತನದೊಂದಿಗೆ ಸಮಾನಗೊಳಿಸಿ ನಿಗದಿಪಡಿಸಬೇಕೆಂದು ಸರ್ಕಾರವನ್ನು ಕೋರಿರುತ್ತಾರೆ.

ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 923 ಪಿಪಿಇ 2005, ಬೆಂಗಳೂರು, ದಿನಾಂಕ: 6ನೇ ಡಿಸೆಂಬರ್ 2008.**

ಶ್ರೀ ಡಿ.ಎಂ.ಕಾಮೋಜಿ, ಹಿಂದಿನ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, 6ನೇ ಎಸಿಎಂಎಂ ನ್ಯಾಯಾಲಯ, ಬೆಂಗಳೂರು, ಇವರ ವೇತನವನ್ನು ಜೇಷ್ಠತೆಯಲ್ಲಿ ಇವರಿಗಿಂತಾ ಕಿರಿಯರಾದ ಶ್ರೀ ಎಸ್.ಟಿ.ಬಿಕ್ಕಣ್ಣವರ್, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಇವರ ವೇತನ ರೂ.3100–00ಗಳಿಗೆ ದಿನಾಂಕ:01.03.1998ರಿಂದ ಜಾರಿಗೆ ಬರುವಂತೆ ನಿಗದಿಗೊಳಿಸಿ, ಈ ಇಬ್ಬರೂ ಅಧಿಕಾರಿಗಳಿಗೆ ಮುಂದಿನ ವಾರ್ಷಿಕ ವೇತನ ಮುಂಬಡ್ತಿಯನ್ನು:01.03.1999ಕ್ಕೆ ನಿಗಧಿಗೊಳಿಸುವ ಮೂಲಕ ಅಧಿಕಾರಿಗಳಿಬ್ಬರ ವೇತನವನ್ನು ಸಮತೋಲನಗೊಳಿಸಿದೆ.

ಸದರಿ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂ:ಒಸಾಇ 52007 ಆಂಆಸ 2008, ದಿನಾಂಕ:26.09.200ರನ್ವಯ ಹಾಗೂ ಸರ್ಕಾರಿ ಆದೇಶ ಸಂ:ಆಇ 60 ಎಸ್‌ಆರ್‌ಪಿ 84, ದಿನಾಂಕ:07.11.1984ರಲ್ಲಿ ಕಲ್ಪಿಸಿರುವ ಅವಕಾಶದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ**

ಪಿ.ಆರ್. 95

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಸ್.ಎಸ್.ಕುದರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕುಷ್ಠಗಿ ಇವರಿಗೆ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡುವ ಕುರಿತು.

**ಉಲ್ಲೇಖ:** 1. ಸರ್ಕಾರದ ಅಧಿಸೂಚನೆ ನಂ. ಲಾ 225 ಪಿಪಿಇ 91, ದಿನಾಂಕ 10.06.1994.

2. ಸರ್ಕಾರದ ಆದೇಶ ನಂ. ಲಾ 65 (33) ಪಿಪಿಇ 97, ದಿನಾಂಕ 21/22.06.1997

3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್ / ಸಿಶಾ–1 / 163 / 2007–08, ದಿನಾಂಕ 01.10.2008.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ 10.06.1994ರ ಸರ್ಕಾರದ ಅಧಿಸೂಚನೆ ಕ್ರ.ಸಂ. 71ರನ್ವಯ ಶ್ರೀ ಎಸ್.ಎಸ್. ಕುದರಿ ಇವರು ನೇರ ನೇಮಕಾತಿ ಮೂಲಕ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕವಾಗಿ ದಿನಾಂಕ 24.06.1994ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ (2)ರ ದಿನಾಂಕ 21/22.06.1997ರ ಸರ್ಕಾರದ ಆದೇಶದಲ್ಲಿ ದಿನಾಂಕ 24.06.1996 ರಿಂದ ಜಾರಿಗೆ ಬರುವಂತೆ ಅವರ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವೆಂದು ಘೋಷಿಸಲಾಗಿದೆ.

ಸದರಿಯವರು ಸದರಿ ಹುದ್ದೆಯಲ್ಲಿ ದಿನಾಂಕ 24.06.1994ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಸದರಿ ಹುದ್ದೆಯಲ್ಲಿ ಯಾವುದೇ ಮುಂಬಡ್ತಿ ಇಲ್ಲದೆ ದಿನಾಂಕ 24.06.2004ಕ್ಕೆ 10 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿರುತ್ತಾರೆ. ಇವರು ದಿನಾಂಕ 24.06.1994 ರಿಂದ 24.06.2004ರ ಸೇವಾ ಅವಧಿಯಲ್ಲಿ ಯಾವುದೇ ಅಸಾಧಾರಣ ರಜೆ / ವೇತನ ರಹಿತ ರಜೆಯನ್ನು ಉಪಯೋಗಿಸಿಕೊಂಡಿರುವುದಿಲ್ಲ ಹಾಗೂ ನಿರಂತರ 10 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿರುತ್ತಾರೆ. ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ / ತನಿಖೆ ಬಾಕಿ ಇರುವುದಿಲ್ಲ ಹಾಗೂ ಹೂಡಲು ಉದ್ದೇಶಿಸಿರುವುದಿಲ್ಲ.

ಸದರಿ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ ದಿನಾಂಕ 24.06.2004ಕ್ಕೆ ನಿಕಟಪೂರ್ವ 5 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ ಹಾಗೂ ಸದರಿ ಅಧಿಕಾರಿಯವರಿಗೆ ಸದರಿ 10 ವರ್ಷಗಳ ಸೇವಾ ಅವಧಿಯಲ್ಲಿ ಯಾವುದೇ ಬಡ್ತಿ ನೀಡಿರುವುದಿಲ್ಲ ಮತ್ತು ಅವರು ಬಡ್ತಿಯನ್ನು ನಿರಾಕರಿಸಿರುವುದಿಲ್ಲ. ಆದುದರಿಂದ ಮೇಲೆ ಓದಲಾದ (3)ರ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ತಮ್ಮ ಪತ್ರದಲ್ಲಿ ಸದರಿ ಅಧಿಕಾರಿಯವರಿಗೆ ಅಯ್ಕೆ ಕಾಲಿಕ ವೇತನ ಶ್ರೇಣಿಯನ್ನು ದಿನಾಂಕ 24.06.2004ರಿಂದ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ನಂ. ಒಇ** 455 **ಪಿಪಿಇ** 2008**, ಬೆಂಗಳೂರು, ದಿನಾಂಕ 15ನೇ ಡಿಸೆಂಬರ್** 2008

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಶ್ರೀ ಎಸ್.ಎಸ್.ಕುದರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕುಷ್ಟಗಿ ಅವರಿಗೆ ದಿನಾಂಕ 24.06.2004ರಿಂದ ಅನ್ವಯವಾಗುವಂತೆ ಸರ್ಕಾರದ ಆದೇಶ ನಂ. ಎಫ್‌ಡಿ 88 ಎಸ್‌ಆರ್‌ಪಿ (ಸಿಎಸ್‌ಸಿ) 81, ದಿನಾಂಕ 27.03.1982ರ ಅನ್ವಯ ಸಹಾಯಕ ಸರ್ಕಾರಿ ಅಭಿಯೋಜಕರ ವೇತನ ಶ್ರೇಣಿ ರೂ.6000–150–7200–200–8800–260–10880–320–11200 ರಿಂದ ನಂತರದ ವೇತನ ಶ್ರೇಣಿ ರೂ.6300–150–7200–200–8800–260–10880–320–11840ರ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಕೆ.ಸಿ. ಸಿದ್ದಪ್ಪ**

ಪಿ.ಆರ್. 97

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ.
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಸಕಲೇಶಪುರ ಸಿ.ಜೆ(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಸಹಾಯಕ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಯಲ್ಲಿ ಒಂದು ಬೆರಳಚ್ಚುಗಾರರ ಮತ್ತು ಒಂದು ದಲಾಯತ್ ಹುದ್ದೆಗಳನ್ನು ಸೃಜಿಸುವ ಕುರಿತು.

**ಓದಲಾಗಿದೆ:**

1. ಸರ್ಕಾರದ ಅಧಿಸೂಚನೆ ಸಂ:ಲಾ 238 ಎಲ್‌ಸಿಇ 2006(V), (VI), (VII) ಮತ್ತು (VIII) ದಿನಾಂಕ: 24.03.2007.
2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ:ಡಿಪಿಎನ್/ ಸಿಶಾ1/169/2007–08, ದಿನಾಂಕ: 11.03.2008.

**ಪ್ರಸ್ತಾವನೆ:–**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಸಕಲೇಶಪುರದಲ್ಲಿ ಸಿ.ಜೆ(ಹಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯವನ್ನು ಸೃಜಿಸಲಾಗಿದೆ.

ಮೇಲೆ (5)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಪತ್ರದಲ್ಲಿ ಸಕಲೇಶಪುರದಲ್ಲಿ ಸಿ.ಜೆ(ಹಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯವು ಸೃಜನೆಯಾಗಿದ್ದು, ಸದರಿ ನ್ಯಾಯಾಲಯದಲ್ಲಿ

ರಾಜ್ಯವನ್ನು ಪ್ರತಿನಿಧಿಸಿ ಪ್ರಕರಣಗಳನ್ನು ನಡೆಸಲು ಸದರಿ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ, ಮೇಲಿನ ಅಧಿಸೂಚನೆಗಳಿಗೆ ಅನುಗುಣವಾಗಿ ಅಭಿಯೋಗ ಇಲಾಖೆಗೆ ಒಂದು ಸಹಾಯಕ ಸರ್ಕಾರಿ ಅಭಿಯೋಜಕರ, ಒಂದು ಬೆರಳಚ್ಚುಗಾರ–ವಾ–ಸಹಾಯಕ ಮತ್ತು ಒಂದು ದಲಾಯತ್‌ರ ಹುದ್ದೆಗಳನ್ನು ಸೃಜನೆ ಮಾಡುವಂತೆ ಕೋರಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 141 ಪಿಪಿಇ 2008, ಬೆಂಗಳೂರು, ದಿನಾಂಕ: 16ನೇ ಡಿಸೆಂಬರ್ 2008.**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಸಕಲೇಶಪುರ ಸಿ.ಜೆ.(ಹಿ.ವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಯಲ್ಲಿ ಈ ಕೆಳಕಂಡ ಹುದ್ದೆಗಳನ್ನು ಮೊದಲಬಾರಿ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳು |
|---|---|---|
| 1 | ಬೆರಳಚ್ಚುಗಾರ–ವಾ–ಸಹಾಯಕ | 01 |
| 2 | ದಲಾಯತ್ | 01 |

ಸದರಿ ಹುದ್ದೆಗಳನ್ನು ಬಾಹ್ಯಮೂಲಗಳಿಂದ ಭರ್ತಿಮಾಡಿಕೊಳ್ಳತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆರ್ಥಿಕ ಇಲಾಖೆಯು ಟಿಪ್ಪಣಿ ಸಂ: ಎಫ್‌ಡಿ 786 ವೆಚ್ಚ–7/2008, ದಿನಾಂಕ: 24.11.2008ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ.ಸಿದ್ದಪ್ಪ**

ಪಿ.ಆರ್. 98

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸ ಮತ್ತು ಅಭಿಯೋಗಗಳು)

**ವಿಷಯ:** ಶ್ರೀಮತಿ ಅಂಜಲಿದೇವಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಯಲಯ, ಕೊಪ್ಪಳ, ಇವರಿಗೆ ರಜೆ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ:**
1. ಸದರಿ ಅಧಿಕಾರಿಯವರ ಮನವಿ ದಿನಾಂಕ: 12.08.2008.
2. ಮಹಾಲೇಖಪಾಲರ ಪತ್ರದ ಸಂ: ಜಿಇ 13/ಜೆ4/07–08/1452, ದಿನಾಂಕ: 16.01.2008.
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಸಿಶಾ–1/07/2008–09, ದಿನಾಂಕ: 20.10.2008.

**ಪ್ರಸ್ತಾವನೆ:**

ಶ್ರೀಮತಿ ಅಂಜಲಿದೇವಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಕೊಪ್ಪಳರವರು ಮೇಲೆ (1)ರಲ್ಲಿ ಓದಲಾದ ದಿನಾಂಕ:12.08.2008ರ ಮನವಿಯಲ್ಲಿ, ಸದರಿ ಅಧಿಕಾರಿಯು ಗರ್ಭಿಣಿಯಾಗಿದ್ದು, ವೈದ್ಯರ ಸಲಹೆ ಮೇರೆಗೆ ಈಗಾಗಲೇ ದಿನಾಂಕ: 02.06.2008 ರಿಂದ 30.08.2008ರವರೆಗೆ 90ದಿನಗಳ ಗಳಿಕೆ ರಜೆ ಪಡೆದಿದ್ದು, ಪ್ರಸ್ತುತ ಇನ್ನೂ ವಿಶ್ರಾಂತಿಯನ್ನು ಪಡೆಯುವುದು ಅತ್ಯಾವಶ್ಯಕವೆಂಬ ವೈದ್ಯರ ಸಲಹೆ ಮೇರೆಗೆ ದಿನಾಂಕ: 31.08.2008 ರಿಂದ 03..11.2008ರವರಗೆ 65 ದಿನಗಳ ಪರಿವರ್ತಿತ ರಜೆಗೆ ಹಾಗೂ 04.11.2008 ರಿಂದ 13.11.2008ರ ವರಗೆ 10 ದಿನಗಳ ಗಳಿಕೆ ರಜೆಗೆ ಎಲ್ಲವೂ ಸೇರಿ ಒಟ್ಟು 165ದಿನಗಳ ಸಂಯುಕ್ತ ರಜೆ ನೀಡುವಂತೆ ಮನವಿಯನ್ನು ಸಲ್ಲಿಸಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 16.01.2008ರ ಮಹಾಲೇಖಪಾಲರ ಕಛೇರಿಯ ಪತ್ರದಲ್ಲಿ ಸದರಿ ಅಧಿಕಾರಿಯ ಖಾತೆಯಲ್ಲಿ 153 ದಿನಗಳ ಗಳಿಕೆ ರಜೆಯು ಹಾಗೂ 207 ದಿನಗಳ ಅರ್ಧ ವೇತನ ರಜೆಯು ದಿನಾಂಕ: 01.01.2008ರಂದು ಜಮೆ ಇರುತ್ತದೆಂದು ತಿಳಿಸಿರುತ್ತಾರೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು, ಇವರು ಶ್ರೀಮತಿ ಅಂಜಲಿದೇವಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಕೊಪ್ಪಳ ಇವರಿಗೆ ವೈದ್ಯಕೀಯ ಕಾರಣಗಳಿಗಾಗಿ ಈಗಾಗಲೇ ದಿನಾಂಕ: 02.06.2008 ರಿಂದ 30.08.2008ರವರೆಗಿನ 90 ದಿನಗಳ ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿರುತ್ತದೆಂದು ತಿಳಿಸಿರುತ್ತಾರೆ.

ಪ್ರಸ್ತುತ ವೈದ್ಯರ ಸಲಹೆ ಮೇರೆಗೆ 31.08.2008 ರಿಂದ 03..11.2008ರವರಗೆ 65 ದಿನಗಳ ಪರಿವರ್ತಿತ ರಜೆಗೆ ಹಾಗೂ 04.11.2008 ರಿಂದ 13.11.2008ರ ವರಗೆ 10 ದಿನಗಳ ಗಳಿಕೆ ರಜೆಗೆ, ಒಟ್ಟು 75 ದಿನಗಳ ಸಂಯುಕ್ತ ರಜೆಯನ್ನು ಸದರಿ ರಜೆಯ ಮುಂದುವರಿದ ಅವಧಿಗೆ ಕೋರಿರುತ್ತಾರೆ. ಆದ್ದರಿಂದ, ಎಲ್ಲವೂ ಸೇರಿ ಒಟ್ಟಾರೆ ಒಂದೇ ಅವಧಿಗೆ 165 ದಿನಗಳ

ಸಂಯುಕ್ತ ರಜೆಗೆ ಮಂಜೂರಾತಿಯನ್ನು ಕೋರಿದಂತೆ ಆಗುತ್ತದೆ. ಆದರೆ, ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 3 ಎಸ್‌ಆರ್‌ಎಸ್ 2008, ದಿನಾಂಕ: 14.08.2008ರನ್ವಯ ರೂ.14050–25050ರ ವೇತನ ಶ್ರೇಣಿಯ ಅಧಿಕಾರಿಗಳಿಗೆ 04 ತಿಂಗಳವರೆಗೆ ಮಾತ್ರ ರಜೆಯನ್ನು ಮಂಜೂರು ಮಾಡುವ ಅಧಿಕಾರವನ್ನು ಇಲಾಖಾ ಮುಖ್ಯಸ್ಥರುಗಳಿಗೆ ನೀಡಲಾಗಿದೆ. ಆದ್ದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 192(ಎ)ರನ್ವಯ (ಸರ್ಕಾರದ ಆದೇಶ ಸಂ: ಎಫ್‌ಡಿ. 3 ಎಸ್‌ಆರ್‌ಎಸ್ 2008, ದಿನಾಂಕ: 14.08.2008ರನ್ವಯ) ಸರ್ಕಾರವು ಸದರಿ ಅಧಿಕಾರಿಗೆ ವೈದ್ಯಕೀಯ ಕಾರಣಗಳಿಂದಾಗಿ 165 ದಿನಗಳ ಸಂಯುಕ್ತ ರಜೆಗೆ ಮಂಜೂರಾತಿಯನ್ನು ನೀಡಬೇಕೆಂದು ಶಿಫಾರಸ್ಸನ್ನು ಮಾಡಿರುತ್ತಾರೆ.

ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 468 ಪಿಪಿಇ 2008, ಬೆಂಗಳೂರು, ದಿನಾಂಕ: 18ನೇ ಡಿಸೆಂಬರ್ 2008.**

ಶ್ರೀಮತಿ ಅಂಜಲಿದೇವಿ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.ಎಂ. ನ್ಯಾಯಾಲಯ, ಕೊಪ್ಪಳ ಇವರಿಗೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಈಗಾಗಲೇ ಮಂಜೂರಾತಿ ನೀಡಿದ್ದ ದಿನಾಂಕ:02.06.2008 ರಿಂದ 30.08.2008ರವರೆಗೆ (ಉಭಯ ದಿನಗಳು ಸೇರಿ) 90 ದಿನಗಳ ಗಳಿಕೆ ರಜೆಯನ್ನು ಸೇರಿ, ಪ್ರಸ್ತುತ ದಿನಾಂಕ:21.08.2008 ರಿಂದ 03.11.2008ರವರೆಗೆ(ಉಭಯ ದಿನಗಳು ಸೇರಿ) 65ದಿನಗಳ ಪರಿವರ್ತಿತ ರಜೆಗೆ ಮತ್ತು ದಿನಾಂಕ: 04.11.2008 ರಿಂದ 13.11.2008ರವರೆಗೆ (ಉಭಯ ದಿನಗಳು ಸೇರಿ) 10 ದಿನಗಳ ಗಳಿಕೆ ರಜೆಗೆ ಎಲ್ಲವೂ ಸೇರಿ ಒಟ್ಟು 165 ದಿನಗಳ ಸಂಯೋಜನೆ ರಜೆಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 192(ಎ)ರನ್ವಯ ಸರ್ಕಾರವು ಮಂಜೂರಾತಿಯನ್ನು ನೀಡಿದೆ.

ಸದರಿ ಮಂಜೂರಾತಿಯನ್ನು ಆರ್ಥಿಕ ಇಲಾಖೆಯ ಆದೇಶ ಸಂ: ಎಫ್‌ಡಿ 3 ಎಸ್‌ಆರ್‌ಎಸ್ 2008, ದಿನಾಂಕ: 14.08.2008ರ ಖಂಡಿಕೆ 17.1ರಲ್ಲಿ ಕಲ್ಪಿಸಿರುವ ಅವಕಾಶದನ್ವಯ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ**

ಪಿ.ಆರ್. 99

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಬಿಜಾಪುರದ ಮೂರನೇ ಅಧಿಕ ಸಿವಿಲ್ ಜಡ್ಜ್(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಕನಕಪುರ ಮತ್ತು ರಾಮನಗರದ ಅಧಿಕ ಸಿವಿಲ್ ಜಡ್ಜ್(ಕಿ.ವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಗೆ ತಲಾ ಒಂದು ಬೆರಳಚ್ಚುಗಾರರ ಮತ್ತು ಒಂದು ದಲಾಯತ್ ಹುದ್ದೆಗಳನ್ನು ಸೃಜಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ:ಲಾ 47 ಎಲ್‌ಸಿಇ 2004, ದಿನಾಂಕ: 23.06.2005.
2. ಸರ್ಕಾರದ ಆದೇಶ ಸಂ:ಲಾ 09 ಎಲ್‌ಸಿಇ 2008, ದಿನಾಂಕ: 06.03.2008.
3. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ:ಡಿಪಿಎನ್/ಸಿಶಾ1/196/2007–08, ದಿನಾಂಕ: 27.03.2008.

**ಪ್ರಸ್ತಾವನೆ:–**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರಾಜ್ಯದ ವಿವಿಧ ದರ್ಜೆಯ 90 ನ್ಯಾಯಾಲಯಗಳನ್ನು ಸ್ಥಾಪಿಸಲು ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಬಿಜಾಪುರದಲ್ಲಿ ಮೂರನೇ ಅಧಿಕ ಸಿವಿಲ್ ಜಡ್ಜ್(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಕನಕಪುರ ಮತ್ತು ರಾಮನಗರದಲ್ಲಿ ಅಧಿಕ ಸಿವಿಲ್ ಜಡ್ಜ್(ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಗಳನ್ನು ಪ್ರಾರಂಭಿಸಲು ಮಂಜೂರಾತಿ ನೀಡುವುದರ ಜೊತೆಗೆ, ಸಿಬ್ಬಂದಿಯ ಹುದ್ದೆಗಳ ಸೃಜನೆಗೆ ಆದೇಶಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ(3)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಪತ್ರದಲ್ಲಿ, ಬಿಜಾಪುರದಲ್ಲಿ ಮೂರನೇ ಅಧಿಕ ಸಿವಿಲ್ ಜಡ್ಜ್(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಕನಕಪುರ ಮತ್ತು ರಾಮನಗರದಲ್ಲಿ ಅಧಿಕ ಸಿವಿಲ್ ಜಡ್ಜ್(ಕಿ.ವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯಗಳು ಸೃಜನೆಯಾಗಿವೆ. ಸದರಿ ನ್ಯಾಯಾಲಯಗಳಲ್ಲಿ ರಾಜ್ಯವನ್ನು ಪ್ರತಿನಿಧಿಸಿ ಪ್ರಕರಣಗಳನ್ನು ನಡೆಸಲು ಸದರಿ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ, ಅಭಿಯೋಗ ಇಲಾಖೆಗೆ ತಲಾ ಒಂದು ಸಹಾಯಕ ಸರ್ಕಾರಿ ಅಭಿಯೋಜಕರ, ಒಂದು ಬೆರಳಚ್ಚುಗಾರ–ವಾ–ಸಹಾಯಕ ಮತ್ತು ಒಂದು ದಲಾಯತ್‌ರ ಹುದ್ದೆಗಳನ್ನು ಸೃಜನೆ ಮಾಡುವಂತೆ ಕೋರಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 172 ಪಿಪಿಇ 2008, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2008.**

ಮೇಲಿನ ವಿವರಿಸಿರುವ ಹಿನ್ನೆಲೆಯಲ್ಲಿ, ಬಿಜಾಪುರದ ಮೂರನೇ ಅಧಿಕ ಸಿವಿಲ್ ಜಡ್ಜ್(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಕನಕಪುರ ಮತ್ತು ರಾಮನಗರದ ಅಧಿಕ ಸಿವಿಲ್ ಜಡ್ಜ್(ಕಿ.ವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಸಹಾಯಕ ಸರ್ಕಾರಿ ಅಭಿಯೋಜಕರುಗಳ ಕಛೇರಿಯಲ್ಲಿ ಇದಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನಮೂದಿಸಿರುವಂತೆ ಹುದ್ದೆಗಳನ್ನು ಮೊದಲಬಾರಿ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

ಸದರಿ ಹುದ್ದೆಗಳನ್ನು ಬಾಹ್ಯಮೂಲಗಳಿಂದ ಭರ್ತಿಮಾಡಿಕೊಳ್ಳತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಎಫ್‌ಡಿ 925 ವೆಚ್ಚ–7/2008, ದಿನಾಂಕ: 25.11.2008ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ.ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸ ಮತ್ತು ಅಭಿಯೋಗಗಳು)

**ಅನುಬಂಧ**

**ಬಿಜಾಪುರದ ಅಧಿಕ ಸಿವಿಲ್ ಜೆಡ್ಜ್ (ಹಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಸೃಜಿಸಲಾಗಿರುವ ಹುದ್ದೆಗಳ ವಿವರ**

| ಕ್ರ. ಸಂ. | ಹುದ್ದೆಯ ವಿವರ | ಮಂಜೂರಾದ ಹುದ್ದೆಗಳು |
|---|---|---|
| 1. | ಬೆರಳಚ್ಚುಗಾರ–ವಾ–ಸಹಾಯಕ | 01 |
| 2. | ದಲಾಯತ್ | 01 |

**ಕನಕಪುರ ಅಧಿಕ ಸಿವಿಲ್ ಜೆಡ್ಜ್ (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಸೃಜಿಸಲಾಗಿರುವ ಹುದ್ದೆಗಳ ವಿವರ**

| ಕ್ರ. ಸಂ. | ಹುದ್ದೆಯ ವಿವರ | ಮಂಜೂರಾದ ಹುದ್ದೆಗಳು |
|---|---|---|
| 1. | ಬೆರಳಚ್ಚುಗಾರ–ವಾ–ಸಹಾಯಕ | 01 |
| 2. | ದಲಾಯತ್ | 01 |

**ರಾಮನಗರ ಅಧಿಕ ಸಿವಿಲ್ ಜೆಡ್ಜ್ (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಸೃಜಿಸಲಾಗಿರುವ ಹುದ್ದೆಗಳ ವಿವರ**

| ಕ್ರ. ಸಂ. | ಹುದ್ದೆಯ ವಿವರ | ಮಂಜೂರಾದ ಹುದ್ದೆಗಳು |
|---|---|---|
| 1. | ಬೆರಳಚ್ಚುಗಾರ–ವಾ–ಸಹಾಯಕ | 01 |
| 2. | ದಲಾಯತ್ | 01 |

**ಕೆ.ಸಿ.ಸಿದ್ದಪ್ಪ**

ಪಿ.ಆರ್. 137

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸ ಮತ್ತು ಅಭಿಯೋಗಗಳು)

**ವಿಷಯ:** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ ಹುದ್ದೆಗಳನ್ನು ಭರ್ತಿ ಮಾಡಲು ಆಯ್ಕೆ ಸಮಿತಿಯನ್ನು ಪುನರ್ ರಚಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ನಂ. ಲಾ 222 ಪಿಪಿಇ 2000, ದಿನಾಂಕ 26.02.2002.
2. ಸರ್ಕಾರದ ಆದೇಶ ನಂ. ಒಇ 67 ಪಿಪಿಇ 2004, ದಿನಾಂಕ 04.01.2005
3. ಸರ್ಕಾರದ ಆದೇಶ ನಂ. ಒಇ 300 ಪಿಪಿಇ 2005, ದಿನಾಂಕ 22.07.2005.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್/ ಸಿಶಾ–1/106/ 2008–09, ದಿನಾಂಕ .12.2008.

**ಪ್ರಸ್ತಾವನೆ:**

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಖಾಲಿ ಇರುವ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗಳನ್ನು ಭರ್ತಿ ಮಾಡಲು ಮೇಲೆ (1)ರಲ್ಲಿ ಓದಲಾಗಿರುವ ದಿನಾಂಕ 04.01.2005ರ ಸರ್ಕಾರಿ ಆದೇಶದಲ್ಲಿ ಆಯ್ಕೆ ಸಮಿತಿಯನ್ನು ಪುನರ್ ರಚಿಸಲಾಗಿತ್ತು.

ಮೇಲೆ ಓದಲಾದ (2)ರ ಸರ್ಕಾರದ ಆದೇಶ ದಿನಾಂಕ 04.01.2005ರಲ್ಲಿ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರಚಿಸಲಾಗಿದ್ದ ಆಯ್ಕೆ ಸಮಿತಿಯನ್ನು ಪುನರ್ ರಚಿಸಲಾಗಿತ್ತು. ತದನಂತರ ಮೇಲೆ ಓದಲಾದ (3)ರಲ್ಲಿ ಉಲ್ಲೇಖ (2)ರ ಆದೇಶವನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸಿ, ಉಲ್ಲೇಖ (1)ರ ಸರ್ಕಾರದ ಆದೇಶದಲ್ಲಿ ಈ ಕೆಳಕಂಡ ಸದಸ್ಯರನ್ನು ಒಳಗೊಂಡ ಆಯ್ಕೆ ಸಮಿತಿಯನ್ನು ಪುನರ್ ಸ್ಥಾಪಿಸಲಾಗಿತ್ತು.

| | | |
|---|---|---|
| (1) | ಸರ್ಕಾರದ ಕಾರ್ಯದರ್ಶಿ, ಕಾನೂನು ಇಲಾಖೆ | : ಅಧ್ಯಕ್ಷರು |
| (2) | ಸರ್ಕಾರದ ಕಾರ್ಯದರ್ಶಿ, (ಸೆರೆಮನೆ, ಅಪರಾಧಗಳು ಮತ್ತು ಸಹಾಯಕ ಸೇವೆಗಳು), ಗೃಹ ಮತ್ತು ಸಾರಿಗೆ ಇಲಾಖೆ | : ಸದಸ್ಯರು |
| (3) | ಸರ್ಕಾರದ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ | : ಸದಸ್ಯರು |
| (4) | ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ | : ಸದಸ್ಯರು |
| (5) | ಸರ್ಕಾರದ ಅಪರ ಕಾರ್ಯದರ್ಶಿಗಳು, ಕಾನೂನು ಇಲಾಖೆ (ವ್ಯಾಜ್ಯ-1) | : ಸದಸ್ಯರು |

ಮೇಲೆ (4)ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ ಹುದ್ದೆಗಳನ್ನು ಭರ್ತಿ ಮಾಡಲು ಆಯ್ಕೆ ಸಮಿತಿಯನ್ನು ಈ ಕೆಳಕಂಡಂತೆ ಪುನರ್ ರಚಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ನಂ. ಒಇ 520 ಪಿಪಿಇ 2008, ಬೆಂಗಳೂರು, ದಿನಾಂಕ 12ನೇ ಜನವರಿ 2009**

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಖಾಲಿ ಇರುವ ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ ಹುದ್ದೆಗಳ ಆಯ್ಕೆ ಸಮಿತಿಯನ್ನು ಈ ಕೆಳಕಂಡಂತೆ ಮಾರ್ಪಡಿಸಿ ಪುನರ್ ರಚಿಸಲಾಗಿದೆ.

| | | | |
|---|---|---|---|
| (1) | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಒಳಾಡಳಿತ ಇಲಾಖೆ, ವಿಧಾನ ಸೌಧ, ಬೆಂಗಳೂರು. | : | ಅಧ್ಯಕ್ಷರು |
| (2) | ಸರ್ಕಾರದ ಕಾರ್ಯದರ್ಶಿ, ಒಳಾಡಳಿತ ಇಲಾಖೆ (ಸೆರೆಮನೆ, ಅಪರಾಧಗಳು ಮತ್ತು ಸಹಾಯಕ ಸೇವೆಗಳು), ವಿಧಾನ ಸೌಧ, ಬೆಂಗಳೂರು | : | ಸದಸ್ಯರು |
| (3) | ಸರ್ಕಾರದ ಕಾರ್ಯದರ್ಶಿಗಳು, ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ, ವಿಧಾನ ಸೌಧ, ಬೆಂಗಳೂರು. | : | ಸದಸ್ಯರು |
| (4) | ಸರ್ಕಾರದ ಕಾರ್ಯದರ್ಶಿಗಳು, ಸಮಾಜ ಕಲ್ಯಾಣ ಇಲಾಖೆ, ವಿಕಾಸ ಸೌಧ, ಬೆಂಗಳೂರು | : | ಸದಸ್ಯರು |
| (5) | ರಿಜಿಸ್ಟ್ರಾರ್, ಜುಡಿಷಯಲ್, ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು | : | ಸದಸ್ಯರು |
| (6) | ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಕಾವೇರಿ ಭವನ, ಬೆಂಗಳೂರು | : | ಸದಸ್ಯರು |

ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ–ವ–ಸಹಾಯಕ ಸರ್ಕಾರಿ ವಕೀಲರ ಹುದ್ದೆಗಳನ್ನು ಭರ್ತಿ ಮಾಡಲು ರಚಿಸಿರುವ ಆಯ್ಕೆ ಸಮಿತಿಗೆ ಜಂಟಿ ಅಭಿಯೋಗ ನಿರ್ದೇಶಕರು (ಆಡಳಿತ), ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು ಅವರನ್ನು ಆಯ್ಕೆ ಸಮಿತಿಯ ಕಾರ್ಯದರ್ಶಿ ಆಗಿ ನಾಮ ನಿರ್ದೇಶನ ಮಾಡಲಾಗಿದೆ.

ಸಭೆಯಲ್ಲಿ ಹಾಜರಿರಬೇಕಾದ ಸದಸ್ಯರ ಗಣಪೂರ್ತಿ ಸಂಖ್ಯೆ (ಕೋರಂ) 3 (ಮೂರು) ಆಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ.ಸಿದ್ದಪ್ಪ**

ಪಿ.ಆರ್. 320

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾ ಮತ್ತು ಸು, ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಮೋಹನ್ ಟಿ.ಕುಲಕರ್ಣಿ, ನಿವೃತ್ತ ಜಂಟಿ ಅಭಿಯೋಗ ನಿರ್ದೇಶಕರು, ಬೆಂಗಳೂರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ: ಲಾ 66 ಪಿಪಿಇ 78, ದಿನಾಂಕ: 25.06.1979.

2. ಸರ್ಕಾರದ ಆದೇಶದ ಸಂ. ಲಾ 14 ಪಿಪಿಇ 81, ದಿನಾಂಕ: 09.04.1981.

3. ಸದರಿ ಅಧಿಕಾರಿಯವರ ಮನವಿ ದಿನಾಂಕ: 12.08.2007.

4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/166/2008–09, ದಿನಾಂಕ: 25.08.2008.

**ಪ್ರಸ್ತಾವನೆ:**

ಶ್ರೀ ಮೋಹನ್ ಟಿ.ಕುಲಕರ್ಣಿ, ನಿವೃತ್ತ ಜಂಟಿ ಅಭಿಯೋಗ ನಿರ್ದೇಶಕರು, ಬೆಂಗಳೂರು, ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 25.06.1979ರ ಸರ್ಕಾರದ ಅಧಿಸೂಚನೆಯ ಕ್ರ.ಸಂ: 2ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 13.07.1979ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ನಿವೃತ್ತ ಅಧಿಕಾರಿಯವರ ಜನ್ಮ ದಿನಾಂಕ: 06.07.1948 ಆಗಿದ್ದು, ಸದರಿಯವರ ಜನ್ಮ ದಿನಾಂಕವನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ: 09.04.1981ರ ಸರ್ಕಾರದ ಆದೇಶದಲ್ಲಿ ಒಪ್ಪಲಾಗಿದೆ.

ಸದರಿ ನಿವೃತ್ತ ಅಧಿಕಾರಿಯು ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ, ಸದರಿಯವರು ದಿನಾಂಕ: 13.07.1979 ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆಂದು, ಸದರಿಯವರ ಜನ್ಮ ದಿನಾಂಕವನ್ನು 06.07.1948 ಎಂದು ಸರ್ಕಾರವು ಒಪ್ಪಿರುತ್ತದೆಂದು ತಿಳಿಸಿರುತ್ತಾರೆ. ಸದರಿಯವರು ಅವರ 31ವರ್ಷ 00ತಿಂಗಳು 07ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದ್ದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ಒಂದು ವರ್ಷದ ಹೆಚ್ಚುವರಿ ಸೇವೆಯನ್ನು ಸದರಿಯವರ ಅರ್ಹತಾದಾಯಕ ಸೇವೆಯಲ್ಲಿ ಸೇರ್ಪಡೆ ಮಾಡಲು ಆದೇಶವನ್ನು ಹೊರಡಿಸಬೇಕೆಂದು ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು, ಶ್ರೀ ಮೋಹನ್ ಟಿ.ಕುಲಕರ್ಣಿ, ನಿವೃತ್ತ ಜಂಟಿ ಅಭಿಯೋಗ ನಿರ್ದೇಶಕರು, ಬೆಂಗಳೂರು, ಇವರು ದಿನಾಂಕ: 13.07.1979ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಹಾಜರಾಗಿರುತ್ತಾರೆ. ಇವರ ಜನ್ಮ ದಿನಾಂಕ: 06.07.1948 ಆಗಿರುತ್ತದೆ. ಸದರಿ ಅಧಿಕಾರಿಯು ಅವರ 31ವರ್ಷ 00ತಿಂಗಳು 07ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಒಂದು ವರ್ಷದ ಸೇವೆಯನ್ನು ಹೆಚ್ಚುವರಿಯಾಗಿ ಸದರಿ ಅಧಿಕಾರಿಯ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಸರ್ಕಾರವು ಆದೇಶವನ್ನು ಹೊರಡಿಸಬಹುದೆಂದು ಶಿಫಾರಸ್ಸನ್ನು ಮಾಡಿರುತ್ತಾರೆ. ಸದರಿ ಆದೇಶದ ಪ್ರತಿಯನ್ನು ಮಹಾಲೇಖಪಾಲರ ಕಛೇರಿಗೆ ಮತ್ತು ಸಂಬಂಧಪಟ್ಟ ಅಧಿಕಾರಿಗೆ ಕಳುಹಿಸಿಕೊಡಬೇಕೆಂದು ಕೋರಿರುತ್ತಾರೆ.

ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 389 ಪಿಪಿಇ 2008, ಬೆಂಗಳೂರು, ದಿನಾಂಕ : 4ನೇ ಫೆಬ್ರವರಿ 2009.**

ಶ್ರೀ ಮೋಹನ್ ಟಿ.ಕುಲಕರ್ಣಿ, ನಿವೃತ್ತ ಜಂಟಿ ಅಭಿಯೋಗ ನಿರ್ದೇಶಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ಒಂದು ವರ್ಷದ ಹೆಚ್ಚುವರಿ ಸೇವಾವಧಿಯನ್ನು ಶ್ರೀಯುತರ ನಿವೃತ್ತಿ ಸೌಲಭ್ಯಗಳಿಗೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆ(ವಿಶ್ರಾಂತಿ ವೇತನ)ಯ ಟಿಪ್ಪಣಿ ಸಂ:ಆಇ 32 ವೆಚ್ಚ–11/2008, ದಿನಾಂಕ: 10.12.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ.ಸಿದ್ದಪ್ಪ**

ಪಿ.ಆರ್. 536

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಬೇಲೂರಿನ ಸಿ.ಜೆ(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಗೆ ಒಂದು ಬೆರಳಚ್ಚುಗಾರರ ಮತ್ತು ಒಂದು ದಲಾಯತ್ ಹುದ್ದೆಗಳನ್ನು ಸೃಜಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ:ಲಾ 288 ಎಲ್‌ಸಿಇ 2007(I), (II), (III) ಮತ್ತು (IV) ದಿನಾಂಕ: 02.04.2008.

2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ:ಡಿಪಿಎನ್/ಸಿಶಾ1/10/2008–09, ದಿನಾಂಕ: 15.05.2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಬೇಲೂರಿನ ಸಿ.ಜೆ(ಹಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯವನ್ನು ಸೃಜಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಪತ್ರದಲ್ಲಿ ಬೇಲೂರಿನಲ್ಲಿ ಸಿ.ಜೆ(ಹಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯವು ಸೃಜನೆಯಾಗಿದ್ದು, ಸದರಿ ನ್ಯಾಯಾಲಯದಲ್ಲಿ ರಾಜ್ಯವನ್ನು ಪ್ರತಿನಿಧಿಸಿ ಪ್ರಕರಣಗಳನ್ನು ನಡೆಸಲು ಸದರಿ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ, ಅಭಿಯೋಗ ಇಲಾಖೆಗೆ ಒಂದು ಸಹಾಯಕ ಸರ್ಕಾರಿ ಅಭಿಯೋಜಕರ, ಒಂದು ಬೆರಳಚ್ಚುಗಾರ–ವಾ–ಸಹಾಯಕ ಮತ್ತು ಒಂದು ದಲಾಯತ್‌ರ ಹುದ್ದೆಗಳನ್ನು ಸೃಜನೆ ಮಾಡುವಂತೆ ಕೋರಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 235 ಪಿಪಿಇ 2008, ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2009**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ, ಬೇಲೂರಿನ ಸಿ.ಜೆ.(ಹಿ.ವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯಕ್ಕೆ ಹೊಂದಿಕೊಂಡಂತೆ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಯಲ್ಲಿ ಈ ಕೆಳಕಂಡ ಹುದ್ದೆಗಳನ್ನು ಮೊದಲಬಾರಿ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಸೃಜಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಹೆಸರು | ಮಂಜೂರಾದ ಹುದ್ದೆಗಳು |
|---|---|---|
| 1 | ಬೆರಳಚ್ಚುಗಾರ–ವಾ–ಸಹಾಯಕ | 01 |
| 2 | ದಲಾಯತ್ | 01 |

ಸದರಿ ಹುದ್ದೆಗಳನ್ನು ಬಾಹ್ಯಮೂಲಗಳಿಂದ ಭರ್ತಿಮಾಡಿಕೊಳ್ಳತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆರ್ಥಿಕ ಇಲಾಖೆಯು ಟಿಪ್ಪಣಿ ಸಂ: ಎಫ್‌ಡಿ 758 ವೆಚ್ಚ–7/2008, ದಿನಾಂಕ: 20.11.2008ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ.ಸಿದ್ದಪ್ಪ**

ಪಿ.ಆರ್. 537

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಸ್.ಪರಶಿವಮೂರ್ತಿ, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಆಯುಕ್ತರ ಕಛೇರಿ, ಬೆಂಗಳೂರು ನಗರ ಇವರಿಗೆ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡುವ ಕುರಿತು.

**ಉಲ್ಲೇಖ:**
1. ಸರ್ಕಾರದ ಅಧಿಸೂಚನೆ–II ನಂ. ಲಾ 161 ಪಿಪಿಇ 86, ದಿನಾಂಕ 24.07.1989.
2. ಸರ್ಕಾರದ ಆದೇಶ ನಂ. ಲಾ 186 ಪಿಪಿಇ 91, ದಿನಾಂಕ 16.12.1991.
3. ಸರ್ಕಾರದ ಆದೇಶ ನಂ. ಒಇ 661 ಪಿಪಿಇ 2005, ದಿನಾಂಕ 01.09.2006.
4. ಸರ್ಕಾರದ ಆದೇಶ ನಂ. ಲಾ 173 ಪಿಪಿಇ 94, ದಿನಾಂಕ 22.08.1994.
5. ಸರ್ಕಾರದ ಆದೇಶ ನಂ. ಲಾ 173 ಪಿಪಿಇ 94, ದಿನಾಂಕ 18.01.96.
6. ಸರ್ಕಾರದ ಆದೇಶ ನಂ. ಒಇ 255 ಪಿಪಿಇ 2007, ದಿನಾಂಕ 20.06.2008.
7. ಸರ್ಕಾರದ ಆದೇಶ ನಂ. ಒಇ 88 ಪಿಪಿಇ 2006, ದಿನಾಂಕ 25.01.2007.
8. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್ / ಸಿಶಾ–1 / 163 / 2007–08, ದಿನಾಂಕ 01.10.2008.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ 24.07.1989ರ ಸರ್ಕಾರದ ಅಧಿಸೂಚನೆ ಕ್ರ.ಸಂ. 43ರನ್ವಯ ಶ್ರೀ ಎಸ್.ಪರಶಿವಮೂರ್ತಿ ಇವರು ನೇರ ನೇಮಕಾತಿ ಮೂಲಕ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇಮಕವಾಗಿ ದಿನಾಂಕ 04.08.1989ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ (2)ರ ದಿನಾಂಕ 16.12.1991ರ ಕ್ರ.ಸಂ.33ರ ಅನ್ವಯ ಇವರ ಪರಿವೀಕ್ಷಾ ಪೂರ್ವ ಅವಧಿಯನ್ನು ಒಂದು ವರ್ಷದವರೆಗೆ ಅಥವಾ ಅವರುಗಳು ನಿಗಧಿಪಡಿಸಿರುವ ಎಲ್ಲಾ ಸೇವಾ ಪರೀಕ್ಷೆಗಳನ್ನು ಪಾಸು ಮಾಡುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಲಾಗಿದೆ.

ಮೇಲೆ ಓದಲಾದ (3)ರ ದಿನಾಂಕ 01.09.2006ರ ಸರ್ಕಾರದ ಆದೇಶದಲ್ಲಿ ದಿನಾಂಕ 04.05.1995 ರಿಂದ ಜಾರಿಗೆ ಬರುವಂತೆ ಅವರ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವೆಂದು ಘೋಷಿಸಲಾಗಿದೆ.

ಸದರಿ ಅಧಿಕಾರಿಯವರು ಸೋಮವಾರಪೇಟೆ ನ್ಯಾಯಾಲಯದಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಲಂಚ ಪ್ರಕರಣದ ಆರೋಪದ ಮೇರೆಗೆ ಮಡಿಕೇರಿ ಲೋಕಾಯುಕ್ತ ಪೊಲೀಸರು ಪ್ರಕರಣ ದಾಖಲು ಮಾಡಿದ್ದರಿಂದ, ಇವರನ್ನು ಮೇಲೆ ಓದಲಾದ (4)ರ ದಿನಾಂಕ 22.08.1994ರ ಸರ್ಕಾರದ ಆದೇಶದಲ್ಲಿ ಇವರನ್ನು ಅಮಾನತ್ತುಗೊಳಿಸಲಾಗಿತ್ತು.

ಮೇಲೆ ಓದಲಾದ (5)ರ ದಿನಾಂಕ 18.01.96ರ ಸರ್ಕಾರದ ಆದೇಶದಲ್ಲಿ ಸದರಿ ಅಧಿಕಾರಿಯವರ ಮೇಲಿನ ಆರೋಪದ ಬಗ್ಗೆ ಅಭಿಯೋಜನೆ ಬಾಕಿ ಇಟ್ಟು ಅವರ ಅಮಾನತ್ತನ್ನು ರದ್ದುಗೊಳಿಸಲಾಗಿತ್ತು.

ಸದರಿಯವರ ವಿರುದ್ದದ ಪ್ರಕರಣದ ಬಗ್ಗೆ ಮಡಿಕೇರಿ ಸೆಷನ್ಸ್ ನ್ಯಾಯಾಲಯದ ಆದೇಶ ದಿನಾಂಕ 08.12.2003ರಲ್ಲಿ ಸದರಿ ಅಧಿಕಾರಿಯವರು ಖುಲಾಸೆಗೊಂಡಿದ್ದರಿಂದ ಮೇಲೆ ಓದಲಾದ (6)ರ ದಿನಾಂಕ 20.06.2008ರ ಸರ್ಕಾರದ ಆದೇಶದಲ್ಲಿ ಇವರ ಅಮಾನತ್ತಿನ ಅವಧಿಯನ್ನು ಸಕ್ರಮಗೊಳಿಸಲಾಗಿದೆ.

ಸದರಿ ಅಧಿಕಾರಿಯವರಿಗೆ ಮೇಲೆ ಓದಲಾದ ಸರ್ಕಾರದ ಅಧಿಸೂಚನೆ ದಿನಾಂಕ 25.01.2007ರ ಕ್ರ.ಸಂ. 4ರ ಅನ್ವಯ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಮುಂಬಡ್ತಿ ದೊರಕಿರುತ್ತದೆ.

ಸದರಿಯವರು ಸದರಿ ಹುದ್ದೆಯಲ್ಲಿ ದಿನಾಂಕ 04.08.1989ರಂದು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ. ಸದರಿ ಹುದ್ದೆಯಲ್ಲಿ ಯಾವುದೇ ಮುಂಬಡ್ತಿ ಇಲ್ಲದೆ ದಿನಾಂಕ 04.08.1999ಕ್ಕೆ 10 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿರುತ್ತಾರೆ. ಇವರು ಸದರಿ ಸೇವಾ ಅವಧಿಯಲ್ಲಿ ಯಾವುದೇ ಅಸಾಧಾರಣ ರಜೆ / ವೇತನ ರಹಿತ ರಜೆಯನ್ನು ಉಪಯೋಗಿಸಿಕೊಂಡಿರುವುದಿಲ್ಲ ಹಾಗೂ ನಿರಂತರ 10 ವರ್ಷಗಳ ಸೇವೆಯನ್ನು ಪೂರ್ಣಗೊಳಿಸಿರುತ್ತಾರೆ. ಇವರ ವಿರುದ್ದ ಯಾವುದೇ ಇಲಾಖಾ ವಿಚಾರಣೆ / ತನಿಖೆ ಬಾಕಿ ಇರುವುದಿಲ್ಲ ಹಾಗೂ ಹೂಡಲು ಉದ್ದೇಶಿಸಿರುವುದಿಲ್ಲ.

ಸದರಿ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ ದಿನಾಂಕ 04.08.1999ಕ್ಕೆ ನಿಕಟಪೂರ್ವ 5 ವರ್ಷಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಯಾವುದೇ ಪ್ರತಿಕೂಲ ಷರಾ ಇರುವುದಿಲ್ಲ ಹಾಗೂ ಸದರಿ ಅಧಿಕಾರಿಯವರಿಗೆ ಸದರಿ 10 ವರ್ಷಗಳ ಸೇವಾ ಅವಧಿಯಲ್ಲಿ ಯಾವುದೇ ಬಡ್ತಿ ನೀಡಿರುವುದಿಲ್ಲ ಮತ್ತು ಅವರು ಬಡ್ತಿಯನ್ನು ನಿರಾಕರಿಸಿರುವುದಿಲ್ಲ. ಆದುದರಿಂದ ಮೇಲೆ ಓದಲಾದ (8)ರ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ತಮ್ಮ ಪತ್ರದಲ್ಲಿ ಸದರಿ ಅಧಿಕಾರಿಯವರಿಗೆ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ದಿನಾಂಕ 04.08.1999ರಿಂದ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ನಂ. ಒಇ 454 ಪಿಪಿಇ 2008, ಬೆಂಗಳೂರು, ದಿನಾಂಕ 11ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಶ್ರೀ ಎಸ್.ಪರಶಿವಮೂರ್ತಿ, ಸಹಾಯಕ ಅಭಿಯೋಗ ನಿರ್ದೇಶಕರು, ಆರಕ್ಷಕ ಆಯುಕ್ತರ ಕಛೇರಿ, ಬೆಂಗಳೂರು ನಗರ ಅವರಿಗೆ ದಿನಾಂಕ 04.08.1999ರಿಂದ ಅನ್ವಯವಾಗುವಂತೆ ಸರ್ಕಾರದ ಆದೇಶ ನಂ. ಎಫ್‌ಡಿ 88 ಎಸ್‌ಆರ್‌ಪಿ (ಸಿಎಸ್‌ಸಿ) 81, ದಿನಾಂಕ 27.03.1982ರ ಅನ್ವಯ ಸಹಾಯಕ ಸರ್ಕಾರಿ ಅಭಿಯೋಜಕರ ವೇತನ ಶ್ರೇಣಿ ರೂ.6000–150–7200–200–8800–260–10880–320–11200 ರಿಂದ ನಂತರದ ವೇತನ ಶ್ರೇಣಿ ರೂ.6300–150–7200–200–8800–260–10880–320–11840ರ ಆಯ್ಕೆ ಕಾಲಿಕ ವೇತನ ಶ್ರೇಣಿಯನ್ನು ಮಂಜೂರು ಮಾಡಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ.

**ಕೆ.ಸಿ. ಸಿದ್ದಪ್ಪ**

ಪಿ.ಆರ್. 592 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ.

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ತಿದ್ದುಪಡಿ**

**ಸಂಖ್ಯೆ: ಒಇ 32 ಪಿಪಿಇ 2008, ಬೆಂಗಳೂರು, ದಿನಾಂಕ: 16ನೇ ಫೆಬ್ರವರಿ 2009**

ಸರ್ಕಾರದ ಆದೇಶ ಸಂಖ್ಯೆ: ಒಇ 32 ಪಿಪಿಇ 2008, ದಿನಾಂಕ:16.04.2008ರ ಅನುಬಂಧದಲ್ಲಿ ಈ ಕೆಳಕಂಡಂತೆ ತಿದ್ದುಪಡಿ/ಸೇರ್ಪಡೆ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

1. ಕ್ರ.ಸಂ: 20ರ ಅಂಕಣ 2ರಲ್ಲಿ "ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು" ಎಂಬುವುದರ ಬದಲಾಗಿ "ಸಹಾಯಕ ಸರ್ಕಾರಿ ಅಭಿಯೋಜಕರು" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.
2. ಕ್ರ.ಸಂ: 50ರ ಅಂಕಣ 2ರಲ್ಲಿ "ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು"ರ ನಂತರ "ಸಹಾಯಕ ಅಭಿಯೋಗ ನಿರ್ದೇಶಕರು" ಎಂದು ಮತ್ತು ಅದರ ಎದುರುಗಡೆ ಅಂಕಣ 4ರಲ್ಲಿ "ಅಭಿಯೋಗ ಉಪನಿರ್ದೇಶಕರ ಕಛೇರಿ, ಬೆಂಗಳೂರು ನಗರ" ಎಂದು, ಅಂಕಣ 5ರಲ್ಲಿ "ಒಇ 87 ಪಿಪಿಇ 2004, ದಿನಾಂಕ: 16.05.2006" ಎಂದು ಮತ್ತು ಅಂಕಣ6ರಲ್ಲಿ "31.03.2008" ಎಂದು ಸೇರ್ಪಡೆ ಮಾಡಿಕೊಂಡು ಓದಿಕೊಳ್ಳತಕ್ಕದ್ದು.
3. ಕ್ರ.ಸಂ: 54ರ ಅಂಕಣ 2ರ "ಬೆರಳಚ್ಚುಗಾರರು"ರ ಎದುರುಗಡೆ ಅಂಕಣ3ರಲ್ಲಿ "22" ಎಂಬುವುದರ ಬದಲಾಗಿ "23" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.
4. ಕ್ರ.ಸಂ: 55ರ ಅಂಕಣ 2ರಲ್ಲಿ "ಸರ್ಕಾರಿ ಅಭಿಯೋಜಕರು" ಎಂಬುವುದರ ನಂತರ "ದಲಾಯತ್" ಎಂದು, ಅದರ ಎದುರುಗಡೆ ಅಂಕಣ3ರಲ್ಲಿ "01" ಎಂದು, ಅಂಕಣ 4ರಲ್ಲಿ "ಸಿಟಿ ಸಿವಿಲ್ ಮತ್ತು ಸತ್ರ ನ್ಯಾಯಾಲಯ, ಬೆಂಗಳೂರು ಮಹಾನಗರ, ಬೆಂಗಳೂರು" ಎಂದು, ಅಂಕಣ 5ರಲ್ಲಿ "ಒಇ 87 ಪಿಪಿಇ 2004, ದಿನಾಂಕ: 16.05.2006" ಎಂದು ಮತ್ತು ಅಂಕಣ6ರಲ್ಲಿ "31.03.2008" ಎಂದು ಸೇರ್ಪಡೆ ಮಾಡಿಕೊಂಡು ಓದಿಕೊಳ್ಳತಕ್ಕದ್ದು.
5. ಕ್ರ.ಸಂ: 58ರ ಅಂಕಣ 2ರಲ್ಲಿ "ಸಹಾಯಕ ಸರ್ಕಾರಿ ಅಭಿಯೋಜಕರು" ಎಂಬುವುದರ ನಂತರ "ದಲಾಯತ್" ಎಂದು, ಅದರ ಎದುರುಗಡೆ ಅಂಕಣ 3ರಲ್ಲಿ "01" ಎಂದು, ಅಂಕಣ 4ರಲ್ಲಿ "ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಬ್ಯಾಡಗಿ" ಎಂದು, ಅಂಕಣ5ರಲ್ಲಿ "ಒಇ 87 ಪಿಪಿಇ 2004, ದಿನಾಂಕ: 16.05.2006" ಎಂದು ಮತ್ತು ಅಂಕಣ6ರಲ್ಲಿ "31.03.2008" ಎಂದು ಸೇರ್ಪಡೆ ಮಾಡಿಕೊಂಡು ಓದಿಕೊಳ್ಳತಕ್ಕದ್ದು.
6. ಕ್ರ.ಸಂ: 63ರ ಅಂಕಣ 2ರಲ್ಲಿ "ಅಧಿಕ ಸರ್ಕಾರಿ ಅಭಿಯೋಜಕರು"ರ ನಂತರ "ದಲಾಯತ್" ಎಂದು, ಅಂಕಣ 3ರಲ್ಲಿ "01" ಎಂದು, ಅಂಕಣ 4ರಲ್ಲಿ "ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ತುಮಕೂರು" ಎಂದು, ಅಂಕಣ5ರಲ್ಲಿ "ಒಇ 87 ಪಿಪಿಇ 2004, ದಿನಾಂಕ:16.05.2006" ಎಂದು ಮತ್ತು ಅಂಕಣ6ರಲ್ಲಿ "31.03.2008" ಎಂದು ಸೇರ್ಪಡೆ ಮಾಡಿಕೊಂಡು ಓದಿಕೊಳ್ಳತಕ್ಕದ್ದು.
7. ಕ್ರ.ಸಂ: 68ರ ಅಂಕಣ 2ರಲ್ಲಿ "ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು" ಎಂಬುವುದರ ಬದಲಾಗಿ "ಅಧಿಕ ಸರ್ಕಾರಿ ಅಭಿಯೋಜಕರು" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.
8. ಕ್ರ.ಸಂ: 72ರ ಅಂಕಣ 2ರಲ್ಲಿ "ಅಧಿಕ ಸಹಾಯಕ ಸರ್ಕಾರಿ ಅಭಿಯೋಜಕರು" ಎಂಬುವುದರ ಬದಲಾಗಿ "ಅಧಿಕ ಸರ್ಕಾರಿ ಅಭಿಯೋಜಕರು" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.
9. ಕ್ರ.ಸಂ: 76ರ ಅಂಕಣ 3ರಲ್ಲಿ "03" ಎಂಬುವುದರ ಬದಲಾಗಿ "01" ಎಂದು ತಿದ್ದುಪಡಿ ಮಾಡಿಕೊಂಡು ಓದುಕೊಳ್ಳತಕ್ಕದ್ದು.
10. ಕ್ರ.ಸಂ: 83ರ ಅಂಕಣ 4ರಲ್ಲಿ "ಸಹಾಯಕ ಸರ್ಕಾರಿ ಅಭಿಯೋಜಕರು ಕಛೇರಿ, ಬೀಳಗಿ" ಎಂಬುವುದರ ಬದಲಾಗಿ "ಸಹಾಯಕ ಸರ್ಕಾರಿ ಅಭಿಯೋಜಕರು ಕಛೇರಿ, ಶಿಗ್ಗಾಂವ್" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.
11. ಕ್ರ.ಸಂ: 95ರ ಅಂಕಣ 2ರ "ಬೆರಳಚ್ಚುಗಾರರ–ವಾ–ಸಹಾಯಕ"ರ ಎದುರುಗಡೆ ಅಂಕಣ3ರಲ್ಲಿ "01" ಎಂದು ಸೇರ್ಪಡೆ ಮಾಡಿಕೊಂಡು ಓದಿಕೊಳ್ಳತಕ್ಕದ್ದು.
12. ಕ್ರ.ಸಂ: 103ರ ಅಂಕಣ 2ರಲ್ಲಿ "ಸಹಾಯಕ ಸರ್ಕಾರಿ ಅಭಿಯೋಜಕರು" ಎಂಬುವುದರ ಬದಲಾಗಿ "ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರು" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು
13. ಕ.ಸಂ:109ರಅಂಕಣ 2ರ "ಬೆರಳಚ್ಚುಗಾರ–ವಾ–ಸಹಾಯಕರ" ನಂತರ ಅಂಕಣ 3ರಲ್ಲಿ "01"ಎಂಬುದನ್ನು ಸೇರ್ಪಡೆ ಮಾಡಿಕೊಂಡು ಓದಿಕೊಳ್ಳತಕ್ಕದ್ದು ಹಾಗೂ ಅಂಕಣ 2ರಲ್ಲಿ "ಬೆರಳಚ್ಚುಗಾರ–ವಾ–ಸಹಾಯಕ"ರ ನಂತರ "ದಲಾಯತ್" ಎಂದು, ಅದರ ಎದುರುಗಡೆ ಅಂಕಣ 3ರಲ್ಲಿ "01" ಎಂದು, ಅಂಕಣ4ರಲ್ಲಿ "ಅಧಿಕ ಸಿ.ಜೆ.(ಕಿ.ವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ ಕೆ.ಜಿ.ಎಫ್." ಎಂದು, ಅಂಕಣ 5ರಲ್ಲಿ "ಒಇ 87 ಪಿಪಿಇ 2004, ದಿನಾಂಕ: 16.05.2006" ಎಂದು ಮತ್ತು ಅಂಕಣ6ರಲ್ಲಿ "31.03.2008" ಎಂದು ಸೇರ್ಪಡೆ ಮಾಡಿಕೊಂಡು ಓದಿಕೊಳ್ಳತಕ್ಕದ್ದು.
14. ಕ್ರ.ಸಂ:116ರ ಅಂಕಣ 4ರಲ್ಲಿ "ಕನಕಪುರ" ಎಂಬುವುದರ ಬದಲಾಗಿ "ಬೆಳಗಾವಿ" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.
15. ಕ್ರ.ಸಂ: 126ರಲ್ಲಿ ಅಂಕಣ 2ರಲ್ಲಿ "ದಲಾಯತ್" ಎಂಬುದನ್ನು ಅದರ ಎದುರುಗಡೆಯ ಅಂಕಣ3ರಲ್ಲಿ "01" ಎಂಬುದನ್ನು, ಅಂಕಣ 4ರಲ್ಲಿ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾಸನ" ಎಂಬುದನ್ನು, ಅಂಕಣ5ರಲ್ಲಿ "ಒಇ 87 ಪಿಪಿಇ 2004, ದಿನಾಂಕ: 16.05.2006" ಎಂಬುವುದನ್ನು ಮತ್ತು ಅಂಕಣ6ರಲ್ಲಿ "31.03.2008" ಎಂಬುವುದನ್ನು ಕೈಬಿಟ್ಟು ಓದಿಕೊಳ್ಳತಕ್ಕದ್ದು.
16. ಕ್ರ.ಸಂ: 127ರ ಅಂಕಣ 2ರಲ್ಲಿ "ಜವಾನ" ಎಂಬುವುದನ್ನು "ದಲಾಯತ್" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

17. ಕ್ರ.ಸಂ: 130ರಲ್ಲಿ ಅಂಕಣ 4ರಲ್ಲಿ "ವಿಶೇಷ ಎನ್‌ಡಿಪಿಎಸ್ ನ್ಯಾಯಾಲಯ" ಎಂಬುವುದರ ಬದಲಾಗಿ "ಎನ್.ಡಿ.ಪಿ.ಎಸ್. ನ್ಯಾಯಾಲಯ" ಎಂದು ತಿದ್ದುಪಡಿ ಮಾಡಿಕೊಂಡು ಓದಿಕೊಳ್ಳತಕ್ಕದ್ದು.
18. ಕ್ರ.ಸಂ: 135ರ ಅಂಕಣ4ರಲ್ಲಿ "ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ" ಎಂದು ಸೇರ್ಪಡೆ ಮಾಡಿಕೊಂಡು ಓದಿಕೊಳ್ಳತಕ್ಕದ್ದು.
19. ಕ್ರ.ಸಂ: 136ರ ಅಂಕಣ 4ರಲ್ಲಿ "ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ" ಎಂದು ಸೇರ್ಪಡೆ ಮಾಡಿಕೊಂಡು ಓದಿಕೊಳ್ಳತಕ್ಕದ್ದು.

ಉಳಿದಂತೆ ಸರ್ಕಾರದ ಆದೇಶ ಸಂಖ್ಯೆ: ಒಇ 32 ಪಿಪಿಇ 2008, ದಿನಾಂಕ: 16.04.2008ರಲ್ಲಿ ಮತ್ತು ಅದರ ಅನುಬಂಧದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಪಿ.ಆರ್. 634

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಅಭಿಯೋಗಗಳು)

**ವಿಷಯ:** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ 67 ಸಹಾಯಕ ಸರ್ಕಾರಿ ಅಭಿಯೋಜಕರ–ವ–ಸಹಾಯಕ ಸರ್ಕಾರಿ ವಕೀಲರ ಹುದ್ದೆಗಳ ಸೃಜನೆ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶದ ಸಂ: ಲಾ 129 ಎಲ್‌ಸಿಇ 2002, ದಿನಾಂಕ:23.04.2003.
2. ಸರ್ಕಾರದ ಆದೇಶದ ಸಂ: ಲಾ 51 ಎಲ್‌ಸಿಇ 2002, ದಿನಾಂಕ:25.06.2002.
3. ಸರ್ಕಾರದ ಆದೇಶದ ಸಂ: ಲಾ 47 ಎಲ್‌ಸಿಇ 2004, ದಿನಾಂಕ:31.03.2006.
4. ಸರ್ಕಾರದ ಆದೇಶದ ಸಂ: ಲಾ 250 ಎಲ್‌ಸಿಇ 1980, ದಿನಾಂಕ:10.09.1981.
5. ಸರ್ಕಾರದ ಆದೇಶದ ಸಂ: ಲಾ 185 ಎಲ್‌ಸಿಇ 1995, ದಿನಾಂಕ:29.03.1996.
6. ಸರ್ಕಾರದ ಆದೇಶದ ಸಂ: ಲಾ 47 ಎಲ್‌ಸಿಇ 2004, ದಿನಾಂಕ:25.07.2006.
7. ಸರ್ಕಾರದ ಆದೇಶದ ಸಂ: ಲಾ 135 ಎಲ್‌ಸಿಇ 2002, ದಿನಾಂಕ:23.04.2003.
8. ಸರ್ಕಾರದ ಆದೇಶದ ಸಂ: ಲಾ 09 ಎಲ್‌ಸಿಇ 2008, ದಿನಾಂಕ:06.03.2008.
9. ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆ ಸಂ: ಜಿಒಬಿ(I)/412/2000, ದಿನಾಂಕ: 23.07.2003.
10. ಸರ್ಕಾರದ ಆದೇಶದ ಸಂ: ಲಾ 206 ಎಲ್‌ಸಿಇ 1997, ದಿನಾಂಕ:12.01.1998 ಹಾಗೂ ಸರ್ಕಾರದ ಆದೇಶ ಸಂ: ಲಾ 220 ಎಲ್‌ಸಿಇ 2005, ದಿನಾಂಕ:17.06.2006.
11. ಸರ್ಕಾರದ ಆದೇಶದ ಸಂ: ಲಾ 47 ಎಲ್‌ಸಿಇ 2004(ಭಾ–1), ದಿನಾಂಕ:30.05.2006.
12. ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆ ಸಂ: ಜಿಒಬಿ 529/79, ದಿನಾಂಕ:16/17.08.1979
13. ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆ ಸಂ: ಜಿಒಬಿ 412/2000 ದಿನಾಂಕ:03.10.2001
14. ಸರ್ಕಾರದ ಆದೇಶದ ಸಂ: ಲಾ 25 ಎಲ್‌ಎಸಿ 2001, ದಿನಾಂಕ:29.06.2001.
15. ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆ ಸಂ: ಜಿಒಬಿ(I) 412/2000 ದಿನಾಂಕ: 14.10.2003
16. ಸರ್ಕಾರದ ಆದೇಶದ ಸಂ: ಲಾ 108 ಎಲ್‌ಸಿಇ 2003, ದಿನಾಂಕ:23.12.2003.
17. ಸರ್ಕಾರದ ಆದೇಶದ ಸಂ: ಲಾ 292 ಎಲ್‌ಸಿಇ 2000, ದಿನಾಂಕ:16.04.2001.
18. ಸರ್ಕಾರದ ಅಧಿಸೂಚನೆ ಸಂ: ಲಾ 238 ಎಲ್‌ಸಿಇ 2006 (ಭಾಗ V VI VII VIII), ದಿನಾಂಕ:24.03.2007.
19. ಸರ್ಕಾರದ ಅಧಿಸೂಚನೆ ಸಂ: ಲಾ 288 ಎಲ್‌ಸಿಇ 2007 (ಭಾಗ I ಮತ್ತು II), ದಿನಾಂಕ: 02.04.2008.
20. ಸರ್ಕಾರದ ಆದೇಶದ ಸಂ: ಲಾ 78 ಎಲ್‌ಸಿಇ 2006, ದಿನಾಂಕ: 30.08.2006.
21. ಸರ್ಕಾರದ ಆದೇಶದ ಸಂ: ಲಾ 202 ಎಲ್‌ಸಿಇ 2006, ದಿನಾಂಕ:02.03.2007.
22. ಸರ್ಕಾರದ ಆದೇಶದ ಸಂ: ಲಾ 288 ಎಲ್‌ಸಿಇ 2007, ದಿನಾಂಕ:10.12.2007.
23. ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆ ಸಂ: ಆರ್‌ಒಸಿ ಸಂ. 2787/62-C.B. ದಿನಾಂಕ:05.02.1965

24. ಕರ್ನಾಟಕ ಉಚ್ಚ ನ್ಯಾಯಾಲಯದ ಅಧಿಸೂಚನೆ ಸಂ: ಜಿಓಬಿ(I) 303/2002, ದಿನಾಂಕ: 02.09.2002.
25. ಸರ್ಕಾರದ ಆದೇಶದ ಸಂ: ಲಾ 238 ಎಲ್‌ಸಿಇ 2006, ದಿನಾಂಕ:07.03.2007.
26. ಸರ್ಕಾರದ ಆದೇಶದ ಸಂ: ಲಾ 121 ಎಲ್‌ಸಿಇ 1999, ದಿನಾಂಕ:08.11.2000.
27. ಸರ್ಕಾರದ ಆದೇಶದ ಸಂ: ಲಾ 47 ಎಲ್‌ಸಿಇ 2004(ಭಾ–1), ದಿನಾಂಕ: 12.10.2006.
28. ಸರ್ಕಾರದ ಅಧಿಸೂಚನೆ-I, II ಮತ್ತು III ಸಂ:ಲಾ 246 ಎಲ್‌ಸಿಇ 2007, ದಿನಾಂಕ:14.11.2007.
29. ಸರ್ಕಾರದ ಆದೇಶದ ಸಂ: ಲಾ 243 ಎಲ್‌ಸಿಇ 1999, ದಿನಾಂಕ:02.02.2001.
30. ಸರ್ಕಾರದ ಆದೇಶದ ಸಂ: ಲಾ 320 ಎಲ್‌ಸಿಇ 2001, ದಿನಾಂಕ:25.02.2002.
31. ಸರ್ಕಾರದ ಆದೇಶದ ಸಂ: ಲಾ 47 ಎಲ್‌ಸಿಇ 2004, ದಿನಾಂಕ:23.06.2005.
32. ಸರ್ಕಾರದ ಆದೇಶದ ಸಂ: ಲಾ 09 ಎಲ್‌ಸಿಇ 2008, ದಿನಾಂಕ: 06.03.2008.
33. ಸರ್ಕಾರದ ಆದೇಶದ ಸಂ: ಲಾ 100 ಎಲ್‌ಸಿಇ 2000, ದಿನಾಂಕ:17.04.2001 ಮತ್ತು ಸರ್ಕಾರದ ಅಧಿಸೂಚನೆ IV ಸಂ: ಲಾ 100 ಎಲ್‌ಸಿಇ 2000, ದಿನಾಂಕ: 10.08.2001
34. ಸರ್ಕಾರದ ಆದೇಶದ ಸಂ: ಲಾ 97 ಎಲ್‌ಸಿಇ 2003, ದಿನಾಂಕ:12.09.2003.
35. ಸರ್ಕಾರದ ಆದೇಶದ ಸಂ: ಲಾ 120 ಎಲ್‌ಸಿಇ 91, ದಿನಾಂಕ: 24.10.1991.
36. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್ / ಸಿಶಾ–1 / 100 / 2008–09, ದಿನಾಂಕ 23.12.2008

**ಪ್ರಸ್ತಾವನೆ:**

ಮೇಲೆ ಓದಲಾದ (1) ರಿಂದ (35)ರಲ್ಲಿನ ಸರ್ಕಾರದ ಆದೇಶ / ಅಧಿಸೂಚನೆಗಳ ಅನ್ವಯ ನ್ಯಾಯಾಲಯಗಳನ್ನು ಸೃಜಿಸಲಾಗಿದೆ ಮತ್ತು ಹಲವು ನ್ಯಾಯಾಲಯಗಳನ್ನು ಕರ್ನಾಟಕ ಉಚ್ಚನ್ಯಾಯಾಲಯದ ಅಧಿಸೂಚನೆಗಳನ್ವಯ ನ್ಯಾಯಾಲಯಗಳಿಗೆ ಕ್ರಿಮಿನಲ್ ಮೊಕದ್ದೆಮೆಗಳನ್ನು ವಿಚಾರಣೆ ಮಾಡಲು ಅಧಿಕಾರವನ್ನು ಪ್ರತ್ಯಾಯೋಜಿಸಲಾಗಿದೆ ಹಾಗೂ ಹಲವು ನ್ಯಾಯಾಲಯಗಳನ್ನು ಸ್ಥಳಾಂತರಿಸಲಾಗಿದೆ. ಆರ್ಥಿಕ ಇಲಾಖೆಯು 67 ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರುಗಳ ಹುದ್ದೆಗಳನ್ನು ಸೃಜನೆ ಮಾಡಲು ಒಪ್ಪಿಗೆ ನೀಡಿರುತ್ತದೆ. ಸದರಿ 67 ಹುದ್ದೆಗಳನ್ನು ಯಾವ ಯಾವ ಸ್ಥಳಗಳಲ್ಲಿ ಸೃಜಿಸಬೇಕೆಂದು ಮೇಲೆ ಓದಲಾದ (36)ರ ದಿನಾಂಕ 23.12.2008ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 530 ಪಿಪಿಇ 2008, ಬೆಂಗಳೂರು, ದಿನಾಂಕ: 18ನೇ ಫೆಬ್ರವರಿ 2009.**

ಮೇಲೆ (1) ರಿಂದ (36)ರಲ್ಲಿ ಓದಲಾದ ಸರ್ಕಾರದ ಆದೇಶ / ಅಧಿಸೂಚನೆಗಳ ಅನ್ವಯ ಸೃಜಿಸಲಾಗಿರುವ ಮತ್ತು ಕರ್ನಾಟಕ ಮಾನ್ಯ ಉಚ್ಚನ್ಯಾಯಾಲಯದ ಅಧಿಸೂಚನೆಗಳನ್ವಯ ನ್ಯಾಯಾಲಯಗಳಿಗೆ ಕ್ರಿಮಿನಲ್ ಮೊಕದ್ದಮೆಗಳನ್ನು ವಿಚಾರಣೆ ಮಾಡಲು ಅಧಿಕಾರವನ್ನು ಪ್ರತ್ಯಾಯೋಜಿಸಲಾಗಿರುವ ಹಾಗೂ ಹಲವು ನ್ಯಾಯಾಲಯಗಳನ್ನು ಸ್ಥಳಾಂತರಿಸಲಾಗಿರುವ ನ್ಯಾಯಾಲಯಗಳಿಗೆ ಹೊಂದಿಕೊಂಡಂತೆ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ 67 ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಸದರಿ ಹುದ್ದೆಗಳನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದ ಅಂಕಣ (2)ರಲ್ಲಿ ನಮೂದಿಸಿರುವ ಸ್ಥಳಗಳಲ್ಲಿ ತಲಾ 1 (ಒಂದು) ಸಹಾಯಕ ಸರ್ಕಾರಿ ಅಭಿಯೋಜಕರು–ವ–ಸಹಾಯಕ ಸರ್ಕಾರಿ ವಕೀಲರ ಹುದ್ದೆಯನ್ನು ಮೊದಲ ಬಾರಿಗೆ ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ.

ಸದರಿ ಹುದ್ದೆಗಳಿಗೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ "2014–ನ್ಯಾಯಾಪರಿಪಾಲನೆ–00–114–ಕಾನೂನು ಸಲಹೆಗಾರರು ಮತ್ತು ಸಮೂಪದೇಶಕರು–0–02 ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು" ಇದರಡಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.07.1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆರ್ಥಿಕ ಇಲಾಖೆಯು ಟಿಪ್ಪಣಿ ಸಂ: ಎಫ್‌ಡಿ 698 ವೆಚ್ಚ–7/2008, ದಿನಾಂಕ: 14.11.2008ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸ ಮತ್ತು ಅಭಿಯೋಗಗಳು)

**ಸರ್ಕಾರದ ಆದೇಶ ಸಂಖ್ಯೆ: ಒಇ 530 ಪಿಪಿಇ 2008, ದಿನಾಂಕ: 18.02.2009**

**ಅನುಬಂಧ**

| ಕ್ರ.ಸಂ: | ಸಹಾಯಕ ಸರ್ಕಾರಿ ಅಭಿಯೋಜಕರ–ವ–ಸಹಾಯಕ ಸರ್ಕಾರಿ ವಕೀಲರ ಹುದ್ದೆಯನ್ನು ಸೃಜನೆ ಮಾಡಿರುವ ಸ್ಥಳ |
|---|---|
| 1. | ಅಪರ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಹೊಸಕೋಟೆ. |
| 2. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ದೊಡ್ಡಬಳ್ಳಾಪುರ. |
| 3. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ದೇವನಹಳ್ಳಿ. |
| 4. | 2ನೇ ಅಧಿಕ ಸಿ.ಜೆ (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ತುಮಕೂರು. |
| 5. | 3ನೇ ಅಪರ ಸಿ.ಜೆ (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. 4ನೇ ನ್ಯಾಯಾಲಯ, ತುಮಕೂರು. |
| 6. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಗುಬ್ಬಿ. |
| 7. | ಅಧಿಕ ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಧುಗಿರಿ. |
| 8. | ಅಪರ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಚಿಕ್ಕನಾಯಕನಹಳ್ಳಿ. |
| 9. | ಅಪರ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಚನ್ನಪಟ್ಟಣ. |
| 10. | ಅಪರ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ರಾಮನಗರ. |
| 11. | ಅಪರ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಕನಕಪುರ. |
| 12. | ಪ್ರಧಾನ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಕೋಲಾರ. |
| 13. | 2ನೇ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಕೋಲಾರ. |
| 14. | ಅಧಿಕ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಾಲೂರು. |
| 15. | ಅಪರ ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಕೆ.ಜಿ.ಎಫ್. |
| 16. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಶ್ರೀರಂಗಪಟ್ಟಣ. |
| 17. | ಪ್ರಧಾನ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಶ್ರೀರಂಗಪಟ್ಟಣ. |
| 18. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ನಾಗಮಂಗಲ. |
| 19. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಹೊಳೆನರಸೀಪುರ. |
| 20. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಅರಸೀಕೆರೆ. |
| 21. | 1ನೇ ಅಧಿಕ 1ನೇ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮೈಸೂರು. |
| 22. | 3ನೇ ಅಧಿಕ 1ನೇ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮೈಸೂರು. |
| 23. | ಪ್ರಧಾನ 1ನೇ ಸಿ.ಜೆ (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮೈಸೂರು. |
| 24. | 5ನೇ ಅಧಿಕ 1ನೇ ಸಿ.ಜೆ (ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮೈಸೂರು. |
| 25. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಕುಮುಟಾ. |
| 26. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಳವಳ್ಳಿ. |
| 27. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಕೊಳ್ಳೇಗಾಲ. |
| 28. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಹುಣಸೂರು. |
| 29. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಅರಕಲಗೂಡು. |
| 30. | 2ನೇ ಅಪರ ಸಿ.ಜೆ(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಕಡೂರು. |
| 31. | ಅಪರ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಚೆನ್ನರಾಯಪಟ್ಟಣ. |
| 32. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಸಕಲೇಶಪುರ. |
| 33. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಬೇಲೂರು. |
| 34. | 3ನೇ ಹೆಚ್ಚುವರಿ ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮಂಗಳೂರು. |
| 35. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಬಂಟ್ವಾಳ. |
| 36. | ಅಧಿಕ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಬಟ್ಕಳ, |
| 37. | 3ನೇ ಅಧಿಕ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಉಡುಪಿ. |

| ಕ್ರ.ಸಂ: | ಸಹಾಯಕ ಸರ್ಕಾರಿ ಅಭಿಯೋಜಕರ–ವ–ಸಹಾಯಕ ಸರ್ಕಾರಿ ವಕೀಲರ ಹುದ್ದೆಯನ್ನು ಸೃಜನೆ ಮಾಡಿರುವ ಸ್ಥಳ |
|---|---|
| 38. | ಹೆಚ್ಚುವರಿ ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಪುತ್ತೂರು. |
| 39. | ಹೆಚ್ಚುವರಿ ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಚಿಕ್ಕಮಗಳೂರು. |
| 40. | ಅಪರ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಹೊನ್ನಾವರ. |
| 41. | 2ನೇ ಅಪರ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಕುಂದಾಪುರ. |
| 42. | 3ನೇ ಹೆಚ್ಚುವರಿ ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ದಾವಣಗೆರೆ. |
| 43. | 3ನೇ ಅಪರ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಬಳ್ಳಾರಿ. |
| 44. | ಅಪರ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಚೆನ್ನಗಿರಿ. |
| 45. | ಅಪರ ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಸಾಗರ. |
| 46. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಹಿರಿಯೂರು. |
| 47. | 3ನೇ ಅಧಿಕ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಶಿವಮೊಗ್ಗ. |
| 48. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಹರಪನಹಳ್ಳಿ. |
| 49. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಮುದ್ದೇಬಿಹಾಳ್. |
| 50. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಹಾನಗಲ್. |
| 51. | ಪ್ರಧಾನ ಸಿ.ಜೆ.(ಕಿ.ವಿ.) ಮತ್ತು ಪ್ರಧಾನ ಜೆ.ಎಂ.ಎಫ್.ಸಿ. ನ್ಯಾಯಾಲಯ, ಧಾರವಾಡ. |
| 52. | 1ನೇ ಅಪರ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಧಾರವಾಡ. |
| 53. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಇಂಡಿ |
| 54. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಸಿಂಧಗಿ. |
| 55. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ರಾಮದುರ್ಗ. |
| 56. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಖಾನಾಪುರ. |
| 57. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ರಾಯಭಾಗ. |
| 58. | ಅಧಿಕ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಜಮಖಂಡಿ. |
| 59. | 2ನೇ ಅಧಿಕ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಚಿಕ್ಕೋಡಿ. |
| 60. | 3ನೇ ಹೆಚ್ಚುವರಿ ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಬಿಜಾಪುರ. |
| 61. | 4ನೇ ಅಧಿಕ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಗುಲ್ಬರ್ಗ. |
| 62. | 5ನೇ ಅಧಿಕ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಗುಲ್ಬರ್ಗ. |
| 63. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಚಿಂಚೋಳಿ. |
| 64. | ಅಧಿಕ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಆಳಂದ್. |
| 65. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಯಲಬುರ್ಗ. |
| 66. | ಸಿ.ಜೆ.(ಹಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಲಿಂಗಸಗೂರ. |
| 67. | ಅಧಿಕ ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ರಾಯಚೂರು. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ.ಸಿದ್ದಪ್ಪ**

ಪಿ.ಆರ್. 635

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಬಿ.ಹೆಚ್. ಭಾಸ್ಕರ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ತರೀಕೆರೆ ಇವರ ಪರಿವೀಕ್ಷಣಾ ಅವಧಿಯನ್ನು ಘೋಷಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ನಂ. ಒಇ 845 ಪಿಪಿಇ 2005, ದಿನಾಂಕ 03.05.2006.

2) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್ / ಸಿಶಾ.1 / 37 (10) / 2008–09, ದಿನಾಂಕ 19.12.2008.

**ಪ್ರಸ್ತಾವನೆ:**

ಶ್ರೀ ಬಿ.ಹೆಚ್. ಭಾಸ್ಕರ್ ಅವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಯಾಗಿ, ಮೇಲೆ ಓದಲಾದ (1)ರ ಅಧಿಸೂಚನೆ ದಿನಾಂಕ 03.05.2006ರ ಕ್ರ.ಸಂ. 10ರನ್ವಯ ದಿನಾಂಕ 11.05.2006ರ ಪೂರ್ವಾಹ್ನದಂದು ಸಹಾಯಕ ಸರ್ಕಾರಿ ಅಭಿಯೋಜಕರು, 2ನೇ ಜೆಎಂಎಫ್‌ಸಿ ನ್ಯಾಯಾಲಯ, ಶಿವಮೊಗ್ಗ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರು ದಿನಾಂಕ 10.05.2008ಕ್ಕೆ ಎರಡು ವರ್ಷಗಳ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆ. ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನಿಗಧಿಪಡಿಸಲಾಗಿರುವ ಇಲಾಖಾ ಪರೀಕ್ಷೆಗಳಾದ ಅಕೌಂಟ್ಸ್ ಹೈಯರ್ ಮತ್ತು ಜನರಲ್ ಲಾ ಭಾಗ–1 ಪತ್ರಿಕೆ–2ರಲ್ಲಿ ಸದರಿ ಅಧಿಕಾರಿಯವರು ಪರಿವೀಕ್ಷಣಾ ಅವಧಿಯಲ್ಲಿ ತೇರ್ಗಡೆ ಹೊಂದಿರುತ್ತಾರೆ. ಇವರು ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಪ್ರಥಮ ಭಾಷೆಯನ್ನಾಗಿ ಅಭ್ಯಸಿಸಿರುವ ಕಾರಣ, ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದಕ್ಕೆ ವಿನಾಯಿತಿ ನೀಡಲಾಗಿದೆ.

ಸದರಿ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ 2006–07 ಮತ್ತು 2007–08ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಯಾವುದೇ ವ್ಯತಿರಿಕ್ತ ಷರಾ ಇರುವುದಿಲ್ಲ. ಪರಿವೀಕ್ಷಣಾ ಅವಧಿಯಲ್ಲಿ ಯಾವುದೇ ವೇತನ ರಹಿತ ರಜೆಯನ್ನು ಪಡೆದಿರುವುದಿಲ್ಲ ಹಾಗೂ ಇಲಾಖಾ ಅವಕೃಪೆಗೆ ಒಳಗಾಗಿರುವುದಿಲ್ಲ. ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡಿರುವುದಿಲ್ಲ ಮತ್ತು ಸದ್ಯದ ಪರಿಸ್ಥಿತಿಯಲ್ಲಿ ಹೂಡುವ ಅವಶ್ಯಕತೆಯು ಇರುವುದಿಲ್ಲ.

ಆದುದರಿಂದ ಶ್ರೀ ಬಿ.ಹೆಚ್.ಭಾಸ್ಕರ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ತರೀಕೆರೆ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 5(1)(ಎ)ರ ಅನುಸಾರ ದಿನಾಂಕ 11.05.2008ರಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವಂತೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ ಓದಲಾದ (2)ರ ಪತ್ರ ದಿನಾಂಕ 19.12.2008ರಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ನಂ. ಒಇ 6 ಪಿಪಿಇ 2009 ಬೆಂಗಳೂರು, ದಿನಾಂಕ: 19ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಸಿ, ಶ್ರೀ ಬಿ.ಹೆಚ್. ಭಾಸ್ಕರ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ತರೀಕೆರೆ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 5(1)(ಎ)ರ ಅನುಸಾರ ದಿನಾಂಕ 11.05.2008ರ ಪೂರ್ವಾಹ್ನದಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಸಿ. ಸಿದ್ದಪ್ಪ**

ಪಿ.ಆರ್. 687

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಮಹೇಶ್ ವಿರೂಪಾಕ್ಷರಾವ್ ವೈದ್ಯ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಕಲಘಟಗಿ ಇವರ ಪರಿವೀಕ್ಷಣಾ ಅವಧಿಯನ್ನು ಘೋಷಿಸುವ ಕುರಿತು.

**ಓದಲಾಗಿದೆ** 1) ಸರ್ಕಾರದ ಅಧೀಸೂಚನೆ ನಂ. ಒಇ 845 ಪಿಪಿಇ 2005, ದಿನಾಂಕ 03.05.2006.

2) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್ / ಸಿಶಾ.1 / 37 (12) / 2008–09, ದಿನಾಂಕ 19.12.2008.

**ಪ್ರಸ್ತಾವನೆ:**

ಶ್ರೀ ಮಹೇಶ್ ವಿರೂಪಾಕ್ಷರಾವ್ ವೈದ್ಯ ಅವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಯಾಗಿ, ಮೇಲೆ ಓದಲಾದ (1)ರ ಅಧಿಸೂಚನೆ ದಿನಾಂಕ 03.05.2006ರ ಕ್ರ.ಸಂ. 12ರನ್ವಯ ದಿನಾಂಕ 15.05.2006ರ ಅಪರಾಹ್ನದಂದು ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಅಫ್‌ಜಲ್‌ಪುರ, ಗುಲ್ಬರ್ಗ ಜಿಲ್ಲೆ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರು ದಿನಾಂಕ 15.05.2008ಕ್ಕೆ ಎರಡು ವರ್ಷಗಳ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆ. ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನಿಗಧಿಪಡಿಸಲಾಗಿರುವ ಇಲಾಖಾ ಪರೀಕ್ಷೆಗಳಾದ ಅಕೌಂಟ್ಸ್ ಹೈಯರ್ ಮತ್ತು ಜನರಲ್ ಲಾ ಭಾಗ–1 ಪತ್ರಿಕೆ–2ರಲ್ಲಿ ಸದರಿ ಅಧಿಕಾರಿಯವರು ಪರಿವೀಕ್ಷಣಾ ಅವಧಿಯಲ್ಲಿ ತೇರ್ಗಡೆ ಹೊಂದಿರುತ್ತಾರೆ. ಇವರು ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಪ್ರಥಮ ಭಾಷೆಯನ್ನಾಗಿ ಅಭ್ಯಸಿಸಿರುವ ಕಾರಣ, ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದಕ್ಕೆ ವಿನಾಯಿತಿ ನೀಡಲಾಗಿದೆ.

**ಸರ್ಕಾರದ ಆದೇಶ ನಂ. ಒಇ 20 ಪಿಪಿಇ 2009, ಬೆಂಗಳೂರು, ದಿನಾಂಕ: 24ನೇ ಫೆಬವರಿ 2009**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಸಿ, ಶ್ರೀ ಪ್ರಾಣೇಶ್ ಭರತನೂರ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಸಂಕೇಶ್ವರ್ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 5(1)(ಎ)ರ ಅನುಸಾರ ದಿನಾಂಕ 12.05.2008ರ ಪೂರ್ವಾಹ್ನದಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ಆರ್. 717 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀಮತಿ ಸಿ.ಕೆ. ಶ್ರೀವಾಣಿ, ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಸಿಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಗೌರಿಬಿದನೂರು ಇವರ ಪರಿವೀಕ್ಷಣಾ ಅವಧಿಯನ್ನು ಘೋಷಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ನಂ. ಒಇ 845 ಪಿಪಿಇ 2005, ದಿನಾಂಕ 03.05.2006.

2) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್ / ಸಿಶಾ.1 / 37 (22) / 2008–09, ದಿನಾಂಕ 23.12.2008.

**ಪ್ರಸ್ತಾವನೆ:**

ಶ್ರೀಮತಿ ಸಿ.ಕೆ.ಶ್ರೀವಾಣಿ ಅವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಯಾಗಿ, ಮೇಲೆ ಓದಲಾದ (1)ರ ಅಧಿಸೂಚನೆ ದಿನಾಂಕ 03.05.2006ರ ಕ್ರ.ಸಂ. 22ರನ್ವಯ ದಿನಾಂಕ 08.05.2006ರ ಪೂರ್ವಾಹ್ನದಂದು ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಗೌರಿಬಿದನೂರು ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರು ದಿನಾಂಕ 07.05.2008ಕ್ಕೆ ಎರಡು ವರ್ಷಗಳ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆ. ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನಿಗಧಿಪಡಿಸಲಾಗಿರುವ ಇಲಾಖಾ ಪರೀಕ್ಷೆಗಳಾದ ಅಕೌಂಟ್ಸ್ ಹೈಯರ್ ಮತ್ತು ಜನರಲ್ ಲಾ ಭಾಗ–1 ಪತ್ರಿಕೆ–2ರಲ್ಲಿ ಸದರಿ ಅಧಿಕಾರಿಯವರು ಪರಿವೀಕ್ಷಣಾ ಅವಧಿಯಲ್ಲಿ ತೇರ್ಗಡೆ ಹೊಂದಿರುತ್ತಾರೆ. ಇವರು ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಪ್ರಥಮ ಭಾಷೆಯನ್ನಾಗಿ ಅಭ್ಯಸಿಸಿರುವ ಕಾರಣ, ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದಕ್ಕೆ ವಿನಾಯಿತಿ ನೀಡಲಾಗಿದೆ.

ಸದರಿ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ 2006–07 ಮತ್ತು 2007–08ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಯಾವುದೇ ವ್ಯತಿರಿಕ್ತ ಷರಾ ಇರುವುದಿಲ್ಲ. ಪರಿವೀಕ್ಷಣಾ ಅವಧಿಯಲ್ಲಿ ಯಾವುದೇ ವೇತನ ರಹಿತ ರಜೆಯನ್ನು ಪಡೆದಿರುವುದಿಲ್ಲ ಹಾಗೂ ಇಲಾಖಾ ಅವಕೃಪೆಗೆ ಒಳಗಾಗಿರುವುದಿಲ್ಲ. ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡಿರುವುದಿಲ್ಲ ಮತ್ತು ಸದ್ಯದ ಪರಿಸ್ಥಿತಿಯಲ್ಲಿ ಹೂಡುವ ಅವಶ್ಯಕತೆಯು ಇರುವುದಿಲ್ಲ.

ಆದುದರಿಂದ ಶ್ರೀಮತಿ ಸಿ.ಕೆ. ಶ್ರೀವಾಣಿ, ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಗೌರಿಬಿದನೂರು ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 5(1)(ಎ)ರ ಅನುಸಾರ ದಿನಾಂಕ 08.05.2008ರಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವಂತೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ ಓದಲಾದ (2)ರ ಪತ್ರ ದಿನಾಂಕ 23.12.2008ರಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ನಂ. ಒಇ 14 ಪಿಪಿಇ 2009, ಬೆಂಗಳೂರು, ದಿನಾಂಕ: 24ನೇ ಫೆಬವರಿ 2009**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಸಿ, ಶ್ರೀಮತಿ ಸಿ.ಕೆ. ಶ್ರೀವಾಣಿ, ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಗೌರಿಬಿದನೂರು ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 5(1)(ಎ)ರ ಅನುಸಾರ ದಿನಾಂಕ 08.05.2008ರ ಪೂರ್ವಾಹ್ನದಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ಆರ್. 718 ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀಮತಿ ಪಿ.ಕೆ. ಶಕೀಲಾ ಅಬೂಬ್‌ಕರ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಪಿರಿಯಾಪಟ್ಟಣ ಇವರ ಪರಿವೀಕ್ಷಣಾ ಅವಧಿಯನ್ನು ಘೋಷಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ನಂ. ಒಇ 845 ಪಿಪಿಇ 2005, ದಿನಾಂಕ 03.05.2006.

2) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್ / ಸಿಶಾ.1 / 37 (24) / 2008–09, ದಿನಾಂಕ 23.12.2008.

**ಪ್ರಸ್ತಾವನೆ:**

ಶ್ರೀಮತಿ ಪಿ.ಕೆ.ಶಕೀಲಾ ಅಬೂಬ್‌ಕರ್ ಅವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಯಾಗಿ, ಮೇಲೆ ಓದಲಾದ (1)ರ ಅಧಿಸೂಚನೆ ದಿನಾಂಕ 03.05.2006ರ ಕ್ರ.ಸಂ. 24ರನ್ವಯ ದಿನಾಂಕ 08.05.2006ರ ಅಪರಾಹ್ನದಂದು ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕೆ.ಜಿ.ಎಫ್ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರು ದಿನಾಂಕ 08.05.2008ಕ್ಕೆ ಎರಡು ವರ್ಷಗಳ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆ. ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನಿಗಧಿಪಡಿಸಲಾಗಿರುವ ಇಲಾಖಾ ಪರೀಕ್ಷೆಗಳಾದ ಅಕೌಂಟ್ಸ್ ಹೈಯರ್ ಮತ್ತು ಜನರಲ್ ಲಾ ಭಾಗ–1 ಪತ್ರಿಕೆ–2ರಲ್ಲಿ ಸದರಿ ಅಧಿಕಾರಿಯವರು ಪರಿವೀಕ್ಷಣಾ ಅವಧಿಯಲ್ಲಿ ತೇರ್ಗಡೆ ಹೊಂದಿರುತ್ತಾರೆ. ಇವರು ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಪ್ರಥಮ ಭಾಷೆಯನ್ನಾಗಿ ಅಭ್ಯಸಿಸಿರುವ ಕಾರಣ, ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದಕ್ಕೆ ವಿನಾಯಿತಿ ನೀಡಲಾಗಿದೆ.

ಸದರಿ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ 2006–07 ಮತ್ತು 2007–08ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಯಾವುದೇ ವ್ಯತಿರಿಕ್ತ ಷರಾ ಇರುವುದಿಲ್ಲ. ಪರಿವೀಕ್ಷಣಾ ಅವಧಿಯಲ್ಲಿ ಯಾವುದೇ ವೇತನ ರಹಿತ ರಜೆಯನ್ನು ಪಡೆದಿರುವುದಿಲ್ಲ ಹಾಗೂ ಇಲಾಖಾ ಅವಕೃಪೆಗೆ ಒಳಗಾಗಿರುವುದಿಲ್ಲ. ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡಿರುವುದಿಲ್ಲ ಮತ್ತು ಸದ್ಯದ ಪರಿಸ್ಥಿತಿಯಲ್ಲಿ ಹೂಡುವ ಅವಶ್ಯಕತೆಯು ಇರುವುದಿಲ್ಲ.

ಆದುದರಿಂದ ಶ್ರೀಮತಿ ಪಿ.ಕೆ. ಶಕೀಲಾ ಅಭೂಬ್‌ಕರ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಪಿರಿಯಾಪಟ್ಟಣ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 5(1)(ಎ)ರ ಅನುಸಾರ ದಿನಾಂಕ 09.05.2008ರಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವಂತೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ ಓದಲಾದ (2)ರ ಪತ್ರ ದಿನಾಂಕ 23.12.2008ರಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ನಂ. ಒಇ 15 ಪಿಪಿಇ 2009, ಬೆಂಗಳೂರು, ದಿನಾಂಕ: 24ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಸಿ, ಶ್ರೀಮತಿ ಪಿ.ಕೆ. ಶಕೀಲಾ ಅಬೂಬ್‌ಕರ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಪಿರಿಯಾಪಟ್ಟಣ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 5(1)(ಎ)ರ ಅನುಸಾರ ದಿನಾಂಕ 09.05.2008ರ ಪೂರ್ವಾಹ್ನದಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ಆರ್. 719

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಶರಶ್ಚಂದ್ರ ರಾಚಯ್ಯ ಹೊಸಮಠ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಬೀಳಗಿ ಇವರ ಪರಿವೀಕ್ಷಣಾ ಅವಧಿಯನ್ನು ಘೋಷಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಅಧೀಸೂಚನೆ ನಂ. ಒಇ 845 ಪಿಪಿಇ 2005, ದಿನಾಂಕ 03.05.2006.

2) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್ / ಸಿಶಾ.1 / 37 (05) / 2008–09, ದಿನಾಂಕ 18.12.2008.

**ಪ್ರಸ್ತಾವನೆ:**

ಶ್ರೀ ಶರಶ್ಚಂದ್ರ ರಾಚಯ್ಯ ಹೊಸಮಠ ಅವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಯಾಗಿದ್ದು, ಮೇಲೆ ಓದಲಾದ (1)ರ ಅಧಿಸೂಚನೆ ದಿನಾಂಕ 03.05.2006ರ ಕ್ರ.ಸಂ. 05ರನ್ವಯ ದಿನಾಂಕ 01.06.2006ರ ಪೂರ್ವಾಹ್ನದಂದು ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಇಂಡಿ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರು ದಿನಾಂಕ 31.05.2008ಕ್ಕೆ ಎರಡು ವರ್ಷಗಳ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆ. ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನಿಗಧಿಪಡಿಸಲಾಗಿರುವ ಇಲಾಖಾ ಪರೀಕ್ಷೆಗಳಾದ ಅಕೌಂಟ್ಸ್ ಹೈಯರ್ ಮತ್ತು ಜನರಲ್ ಲಾ ಭಾಗ–1 ಪತ್ರಿಕೆ–2ರಲ್ಲಿ ಸದರಿ ಅಧಿಕಾರಿಯವರು ಪರಿವೀಕ್ಷಣಾ ಅವಧಿಯಲ್ಲಿ ತೇರ್ಗಡೆ ಹೊಂದಿರುತ್ತಾರೆ. ಇವರು ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಪ್ರಥಮ ಭಾಷೆಯನ್ನಾಗಿ ಅಭ್ಯಸಿಸಿರುವ ಕಾರಣ, ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದಕ್ಕೆ ವಿನಾಯಿತಿ ನೀಡಲಾಗಿದೆ.

ಸದರಿ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ 2006–07 ಮತ್ತು 2007–08ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಯಾವುದೇ ವ್ಯತಿರಿಕ್ತ ಷರಾ ಇರುವುದಿಲ್ಲ. ಪರಿವೀಕ್ಷಣಾ ಅವಧಿಯಲ್ಲಿ ಯಾವುದೇ ವೇತನ ರಹಿತ ರಜೆಯನ್ನು ಪಡೆದಿರುವುದಿಲ್ಲ ಹಾಗೂ ಇಲಾಖಾ ಅವಕೃಪೆಗೆ ಒಳಗಾಗಿರುವುದಿಲ್ಲ. ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡಿರುವುದಿಲ್ಲ ಮತ್ತು ಸದ್ಯದ ಪರಿಸ್ಥಿತಿಯಲ್ಲಿ ಹೂಡುವ ಅವಶ್ಯಕತೆಯು ಇರುವುದಿಲ್ಲ.

ಆದುದರಿಂದ ಶ್ರೀ ಶರಶ್ಚಂದ್ರ ರಾಚಯ್ಯ ಹೊಸಮಠ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬೀಳಗಿ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 5(1)(ಎ)ರ ಅನುಸಾರ ದಿನಾಂಕ 01.06.2008ರಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವಂತೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ ಓದಲಾದ (2)ರ ಪತ್ರ ದಿನಾಂಕ 18.12.2008ರಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ನಂ. ಒಇ 553 ಪಿಪಿಇ 2008, ಬೆಂಗಳೂರು, ದಿನಾಂಕ: 18ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಸಿ, ಶ್ರೀ ಶರಶ್ಚಂದ್ರ ರಾಚಯ್ಯ ಹೊಸಮಠ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಬೀಳಗಿ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 5(1)(ಎ)ರ ಅನುಸಾರ ದಿನಾಂಕ 01.06.2008ರ ಪೂರ್ವಾಹ್ನದಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ಆರ್. 722

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಎಸ್.ಹೆಚ್. ಕಳಸಣ್ಣವರ್, ನಿವೃತ್ತ ಸರ್ಕಾರಿ ಅಭಿಯೋಜಕರು, ಬೆಳಗಾವಿ, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಲಾ 66 ಪಿಪಿಇ 78, ದಿನಾಂಕ: 25.06.1979.
2. ಸರ್ಕಾರದ ಆದೇಶದ ಸಂ. ಲಾ 132 ಪಿಪಿಇ 80, ದಿನಾಂಕ: 29.10.1980.87.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 24.09.2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/207/2008–09, ದಿನಾಂಕ: 03.10.2008.

**ಪ್ರಸ್ತಾವನೆ:**

ಶ್ರೀ ಎಸ್.ಹೆಚ್. ಕಳಸಣ್ಣವರ್, ನಿವೃತ್ತ ಸರ್ಕಾರಿ ಅಭಿಯೋಜಕರು, ಬೆಳಗಾವಿ, ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 25.06.1979ರ ಸರ್ಕಾರದ ಅಧಿಸೂಚನೆಯ ಕ್ರ.ಸಂ: 21ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 07.07.1979ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 29.10.1980ರ ಸರ್ಕಾರದ ಆದೇಶದನ್ವಯ ಸದರಿ ನಿವೃತ್ತ ಅಧಿಕಾರಿಯ ಜನ್ಮ ದಿನಾಂಕವನ್ನು 01.06.1948 ಎಂದು ಒಪ್ಪಲಾಗಿದೆ.

ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ, ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯ ಮತ್ತು (2)ರಲ್ಲಿ ಓದಲಾದ ಆದೇಶದನ್ವಯ ಸದರಿ ನಿವೃತ್ತ ಅಧಿಕಾರಿಯವರು 31ವರ್ಷ 01 ತಿಂಗಳು ಮತ್ತು 06 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ಹೆಚ್ಚುವರಿ ಸೇವೆಯನ್ನು ಸದರಿ ನಿವೃತ್ತ ಅಧಿಕಾರಿಯ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು, ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯ ಮತ್ತು (2)ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ಸದರಿ ನಿವೃತ್ತ ಅಧಿಕಾರಿಯು ಅವರ 31ವರ್ಷ 01ತಿಂಗಳು 06 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಮಾತ್ರ, ಒಂದು ವರ್ಷದ ಸೇವೆಯನ್ನು ಹೆಚ್ಚುವರಿಯಾಗಿ ಸದರಿ ನಿವೃತ್ತ ಅಧಿಕಾರಿಯ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಸರ್ಕಾರವು ಆದೇಶವನ್ನು ಹೊರಡಿಸಬೇಕೆಂದು ಶಿಫಾರಸ್ಸನ್ನು ಮಾಡಿರುತ್ತಾರೆ.

ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 449 ಪಿಪಿಇ 2008, ಬೆಂಗಳೂರು, ದಿನಾಂಕ : 26ನೇ ಫೆಬ್ರವರಿ 2009.**

ಶ್ರೀ ಎಸ್.ಹೆಚ್. ಕಳಸಣ್ಣವರ್, ನಿವೃತ್ತ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ರೀತ್ಯ ಒಂದು ವರ್ಷದ ಹೆಚ್ಚುವರಿ ಸೇವೆಯನ್ನು ಅವರ ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಆಇ 1530 ವೆಚ್ಚ–7/2008, ದಿನಾಂಕ: 29.12.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 745

**ವಿಷಯ:** ಶ್ರೀ ಯಾಸೀನ್ ಅಹಮದ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಸೋಮವಾರಪೇಟೆ ಇವರು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ನಂ. ಒಇ 845 ಪಿಪಿಇ 2005, ದಿನಾಂಕ: 03.05.2006.
2. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ನಂ: ಡಿಪಿಎನ್ / ಸಿಶಾ–1/ 37 (08) / 2008–09, ದಿನಾಂಕ: 19.12.2008.

**ಪ್ರಸ್ತಾವನೆ:**

ಶ್ರೀ ಯಾಸೀನ್ ಅಹಮದ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ.) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸೋಮವಾರಪೇಟೆ ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 03.05.2006ರ (ಕ್ರ.ಸಂ.8) ಅಧಿಸೂಚನೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ನೇಮಕಗೊಂಡು, ದಿನಾಂಕ: 15.05.2006 ಪೂರ್ವಾಹ್ನದಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ದಿನಾಂಕ: 14.05.2008ಕ್ಕೆ ಎರಡು ವರ್ಷಗಳ ಪರಿವೀಕ್ಷಣಾ ಅವಧಿಯು ಮುಕ್ತಾಯಗೊಂಡಿರುತ್ತದೆ.

ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನಿಗದಿಪಡಿಸಲಾಗಿರುವ ಅಕೌಂಟ್ಸ್ ಹೈಯರ್ ಮತ್ತು ಜನರಲ್ ಲಾ ಭಾಗ–1 ಪತ್ರಿಕೆ–2, ಇಲಾಖಾ ಪರೀಕ್ಷೆಗಳನ್ನು ಶ್ರೀ ಯಾಸೀನ್ ಅಹಮದ್ ಇವರು ಪರವೀಕ್ಷಣಾ ಅವಧಿಯಲ್ಲಿ ತೇರ್ಗಡೆ ಹೊಂದಿರುತ್ತಾರೆ. ಹಾಗೂ ಇವರು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಕನ್ನಡವನ್ನು ಪ್ರಥಮ ಭಾಷೆಯನ್ನಾಗಿ ಅಭ್ಯಸಿಸಿರುವ ಕಾರಣ. ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದಕ್ಕೆ ವಿನಾಯಿತಿ ನೀಡಲಾಗಿರುತ್ತದೆ. ದಿನಾಂಕ: 15.05.2006 ರಿಂದ 14.05.2008ರ ಪರಿವೀಕ್ಷಣಾ ಅವಧಿಯಲ್ಲಿ ಇವರು ಯಾವುದೇ ಅಸಾಧಾರಣ ರಜೆ ಪಡೆದಿರುವುದಿಲ್ಲ. ಸದರಿ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ 2006–07 ಮತ್ತು 2007–08ನೇ ಸಾಲುಗಳ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಸದರಿ ಅಧಿಕಾರಿಯವರ ವಿರುದ್ಧ ವ್ಯತಿರಿಕ್ತ ಷರಾ ಇರುವುದಿಲ್ಲ. ಶ್ರೀ ಯಾಸೀನ್ ಅಹಮದ್ ಇವರ ಪರಿವೀಕ್ಷಣಾ

ಅವಧಿಯನ್ನು ದಿನಾಂಕ: 15.05.2008 ರಂದು ತೃಪ್ತಿಕರವಾಗಿ ಪೂರೈಸಿರುವುದಾಗಿ ಘೋಷಣೆ ಮಾಡುವಂತೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 19.12.2008ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಕೋರಿರುತ್ತಾರೆ.

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ನಂ. ಒಇ 5 ಪಿಪಿಇ 2009, ಬೆಂಗಳೂರು, ದಿನಾಂಕ: 19ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಶ್ರೀ ಯಾಸೀನ್ ಅಹಮದ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸೋಮವಾರಪೇಟೆ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವೆಗಳು (ಪರಿವೀಕ್ಷಣಾ) ನಿಯಮಗಳ 1977ರ ನಿಯಮ 5(1)(ಎ)ರ ಅನ್ವಯ ದಿನಾಂಕ: 14.05.2008ರ ಪೂರ್ವಾಹ್ನದಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ಆರ್. 686

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ವಿಷಯ:** ಶ್ರೀ ಆರ್.ಎನ್.ಪಠಾಣ, ನಿವೃತ್ತ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.(ಕಿ.ವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ನಿಪ್ಪಾಣಿ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ–II ಸಂ: ಲಾ 161 ಪಿಪಿಇ 86, ದಿನಾಂಕ: 24.07.1989.
2. ಸರ್ಕಾರದ ಪತ್ರದ ಸಂ. ಲಾ 213 ಪಿಪಿಇ 91, ದಿನಾಂಕ: 17.12.1991.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 10.07.2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/154/2008–09, ದಿನಾಂಕ: 01.08.2008.

**ಪ್ರಸ್ತಾವನೆ:**

ಶ್ರೀ ಆರ್.ಎನ್. ಪಠಾಣ, ನಿವೃತ್ತ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ನಿಪ್ಪಾಣಿ, ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 24.07.1989ರ ಸರ್ಕಾರದ ಅಧಿಸೂಚನೆಯ ಕ್ರ.ಸಂ: 60ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 04.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 17.12.1991ರ ಸರ್ಕಾರದ ಪತ್ರದನ್ವಯ ಸದರಿ ನಿವೃತ್ತ ಅಧಿಕಾರಿಯ ಜನ್ಮ ದಿನಾಂಕವನ್ನು 03.05.1950 ಎಂದು ಒಪ್ಪಲಾಗಿದೆ.

ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ, ಸದರಿ ನಿವೃತ್ತ ಅಧಿಕಾರಿಯವರು ದಿನಾಂಕ: 04.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿದ್ದು, ಇವರ ಜನ್ಮ ದಿನಾಂಕವನ್ನು 03.05.1950 ಎಂದು ಸರ್ಕಾರವು ಒಪ್ಪಿರುವುದರಿಂದ, ಸದರಿ ನಿವೃತ್ತ ಅಧಿಕಾರಿಯು 39ವರ್ಷ 03ತಿಂಗಳು 01ದಿನದ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿದಂತೆ ಆಗಿರುತ್ತದೆ. ಆದ್ದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ನಾಲ್ಕು ವರ್ಷಗಳ ಹೆಚ್ಚುವರಿ ಸೇವೆಯನ್ನು ಸದರಿಯವರ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು, ಶ್ರೀ ಆರ್.ಎನ್. ಪಠಾಣ, ನಿವೃತ್ತ ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.(ಕಿ.ವಿ.) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ನಿಪ್ಪಾಣಿ, ಇವರು ದಿನಾಂಕ: 04.08.1989ರಂದು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ಹಾಜರಾಗಿರುತ್ತಾರೆ. ಇವರ ಜನ್ಮ ದಿನಾಂಕ: 03.05.1950 ಆಗಿರುತ್ತದೆ. ಸದರಿ ಅಧಿಕಾರಿಯು 39ವರ್ಷ 03ತಿಂಗಳು 01ದಿನದ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಮಾತ್ರ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಸೇವೆಯನ್ನು ಹೆಚ್ಚುವರಿಯಾಗಿ ಸದರಿ ಅಧಿಕಾರಿಯ

ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಸರ್ಕಾರವು ಆದೇಶವನ್ನು ಹೊರಡಿಸಬಹುದೆಂದು ಶಿಫಾರಸ್ಸನ್ನು ಮಾಡಿರುತ್ತಾರೆ.

ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 358 ಪಿಪಿಇ 2008, ಬೆಂಗಳೂರು, ದಿನಾಂಕ : 4ನೇ ಮಾರ್ಚ್ 2009.**

ಶ್ರೀ ಆರ್.ಎನ್.ಪಠಾಣ, ನಿವೃತ್ತ ಸಹಾಯಕ ಸರ್ಕಾರಿ ಅಭಿಯೋಜಕರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ರೀತ್ಯ ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಹೆಚ್ಚುವರಿ ಸೇವೆಯನ್ನು ಅವರ ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:ಆಇ 1142 ವೆಚ್ಚ–7/2008, ದಿನಾಂಕ: 29.12.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 825

**ವಿಷಯ:** ಶ್ರೀ ಆರ್.ಎನ್. ಹುಲ್ಲತ್ತಿ, ನಿವೃತ್ತ ಸರ್ಕಾರಿ ಅಭಿಯೋಜಕರು, ವಿಶೇಷ ನ್ಯಾಯಾಲಯ, ಮಂಗಳೂರು ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಹೆಚ್ಚುವರಿ ಅರ್ಹತಾದಾಯಕ ಸೇವೆಯ ಸೇರ್ಪಡೆಗೆ ಪರಿಗಣಿಸುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂ: ಲಾ 123 ಪಿಪಿಇ 85(II), ದಿನಾಂಕ: 20.02.1986.
2. ಸರ್ಕಾರದ ಆದೇಶದ ಸಂ. ಲಾ 9 ಪಿಪಿಇ 87, ದಿನಾಂಕ: 21.01.1987.
3. ಸದರಿ ಅಧಿಕಾರಿಯವರ ಮನವಿ ದಿನಾಂಕ: 22.08.2008.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂ: ಡಿಪಿಎನ್/ಲೆಕ್ಕ–1/195/2008–09, ದಿನಾಂಕ: 28/29.08.2008.

**ಪ್ರಸ್ತಾವನೆ:**

ಶ್ರೀ ಆರ್.ಎನ್. ಹುಲ್ಲತ್ತಿ, ನಿವೃತ್ತ ಸರ್ಕಾರಿ ಅಭಿಯೋಜಕರು, ವಿಶೇಷ ನ್ಯಾಯಾಲಯ, ಮಂಗಳೂರು, ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ: 20.02.1986ರ ಸರ್ಕಾರದ ಅಧಿಸೂಚನೆಯ ಕ್ರ.ಸಂ: 12ರ ಅನ್ವಯ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಹೊಂದಿ, ದಿನಾಂಕ: 05.03.1986ರ ಪೂರ್ವಾಹ್ನ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ: 21.01.1987ರ ಸರ್ಕಾರದ ಆದೇಶದನ್ವಯ ಸದರಿ ನಿವೃತ್ತ ಅಧಿಕಾರಿಯ ಜನ್ಮ ದಿನಾಂಕವನ್ನು 06.06.1950 ಎಂದು ಒಪ್ಪಲಾಗಿದೆ.

ಮೇಲೆ (3)ರಲ್ಲಿ ಓದಲಾದ ಮನವಿಯಲ್ಲಿ, ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆ ಮತ್ತು (2)ರಲ್ಲಿ ಓದಲಾದ ಆದೇಶದನ್ವಯ ಸದರಿ ನಿವೃತ್ತ ಅಧಿಕಾರಿಯು 30 ವರ್ಷಗಳ ನಂತರ ಸರ್ಕಾರಿ ಸೇವೆಗೆ ಸೇರಿರುವುದು ತಿಳಿದುಬರುತ್ತದೆ. ಆದ್ದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರನ್ವಯ ಹೆಚ್ಚುವರಿ ಸೇವೆಯನ್ನು ಸದರಿ ನಿವೃತ್ತ ಅಧಿಕಾರಿಯ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು, ಮೇಲೆ (1)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯ ಮತ್ತು (2)ರಲ್ಲಿ ಓದಲಾದ ಸರ್ಕಾರದ ಆದೇಶದನ್ವಯ ಸದರಿ ನಿವೃತ್ತ ಅಧಿಕಾರಿಯು ಅವರ 35ವರ್ಷ 08ತಿಂಗಳು 29 ದಿನಗಳ ವಯಸ್ಸಿನಲ್ಲಿ ಸರ್ಕಾರಿ ಸೇವೆಗೆ ಸೇರಿರುವುದರಿಂದ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ಪ್ರಕಾರ ನಿವೃತ್ತಿ ವೇತನಕ್ಕೆ ಮಾತ್ರ, ಗರಿಷ್ಠ ಮಿತಿಯಾದ ನಾಲ್ಕು ವರ್ಷಗಳ ಸೇವೆಯನ್ನು ಹೆಚ್ಚುವರಿಯಾಗಿ ಸದರಿ ನಿವೃತ್ತ ಅಧಿಕಾರಿಯ ಅರ್ಹತಾದಾಯಕ ಸೇವೆಗೆ ಸೇರ್ಪಡೆ ಮಾಡಲು ಸರ್ಕಾರವು ಆದೇಶವನ್ನು ಹೊರಡಿಸಬೇಕೆಂದು ಶಿಫಾರಸ್ಸನ್ನು ಮಾಡಿರುತ್ತಾರೆ.

ಆದುದರಿಂದ ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 388 ಪಿಪಿಇ 2008, ಬೆಂಗಳೂರು, ದಿನಾಂಕ : 4ನೇ ಮಾರ್ಚ್ 2009.**

ಶ್ರೀ ಆರ್.ಎಸ್. ಹುಲ್ಲತ್ತಿ, ನಿವೃತ್ತ ಸರ್ಕಾರಿ ಅಭಿಯೋಜಕರು, ಮಂಗಳೂರು, ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 247(ಎ)(1)ರ ರೀತ್ಯ ನಾಲ್ಕು ವರ್ಷಗಳ ಅಧಿಕ ಸೇವೆಯನ್ನು ಅವರ ನಿವೃತ್ತಿ ವೇತನಕ್ಕೆ ಮಾತ್ರ ಹೆಚ್ಚುವರಿ ಅರ್ಹತಾದಾಯಕ ಸೇವೆಯೆಂದು ಪರಿಗಣಿಸಲು ಆದೇಶಿಸಿದೆ.

ಸದರಿ ಆದೇಶವನ್ನು ಆರ್ಥಿಕ ಇಲಾಖೆ(ವಿಶ್ರಾಂತಿ ವೇತನ)ಯ ಟಿಪ್ಪಣಿ ಸಂ:ಆಇ 1278 ವೆಚ್ಚ–7/2008, ದಿನಾಂಕ: 29.12.2008ರ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ.ಸಿ.ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾ ಮತ್ತು ಸು ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 826

**ವಿಷಯ:** ಉತ್ತರ ಕನ್ನಡ ಜಿಲ್ಲೆ ಯಲ್ಲಾಪುರದಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ವಸತಿ ಗೃಹ ನಿರ್ಮಾಣ ಕಾಮಗಾರಿಯ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** 1) ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರ ಆದೇಶ ನಂ.ಎಲ್ಎನ್‌ಡಿ / 1 / ಡಿಎಸ್ಆರ್ / 478 / 87–88, ದಿನಾಂಕ 19.01.1988.

2) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂ:ಡಿಪಿಎನ್ / ವಸತಿ / 79 / 2007–08, ದಿನಾಂಕ:12.01.2009.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ 19.01.1988ರ ಆದೇಶದಲ್ಲಿ ಜಿಲ್ಲಾಧಿಕಾರಿಗಳು, ಉತ್ತರ ಕನ್ನಡ ಜಿಲ್ಲೆ, ಕಾರವಾರ ಇವರು ಉತ್ತರ ಕನ್ನಡ ಜಿಲ್ಲೆ ಯಲ್ಲಾಪುರ ತಾಲ್ಲೂಕು ಯಲ್ಲಾಪುರ ಗ್ರಾಮದ ಸರ್ವೆ ನಂ.4ಅ1ಅ1ಅ1 ರಲ್ಲಿ ಪ್ಲಾಟ್ ನಂ. 861, 862, 863 ಮತ್ತು 865 ರಲ್ಲಿ ಹನ್ನೆರಡು ಗುಂಟೆ ಜಮೀನನ್ನು ಸಹಾಯಕ ಸರ್ಕಾರಿ ಅಭಿಯೋಜಕರು, ಯಲ್ಲಾಪುರ ಮತ್ತು ಅವರ ಸಿಬ್ಬಂದಿಗಳ ವಸತಿ ಗೃಹಗಳನ್ನು ನಿರ್ಮಿಸಲು ನಿವೇಶನವನ್ನು ಮಂಜೂರು ಮಾಡಿರುತ್ತಾರೆ.

ಮೇಲೆ ಓದಲಾದ (2)ರ ದಿನಾಂಕ 12.01.2009ರ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು ಉತ್ತರ ಕನ್ನಡ ಜಿಲ್ಲೆ ಯಲ್ಲಾಪುರದಲ್ಲಿ ಉತ್ತರ ಕನ್ನಡ ಜಿಲ್ಲೆ ಜಿಲ್ಲಾಧಿಕಾರಿಗಳು ಮಂಜೂರು ಮಾಡಿರುವ ಸ್ಥಳದಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ವಸತಿ ಗೃಹ ಕಟ್ಟಡವನ್ನು ನಿರ್ಮಾಣ ಮಾಡುವ ಕಾಮಗಾರಿಗೆ ಸಹಾಯಕ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಉಪವಿಭಾಗ, ಯಲ್ಲಾಪುರ, ಉತ್ತರ ಕನ್ನಡ ಜಿಲ್ಲೆ ಇವರು ತಯಾರಿಸಿರುವ ಪರಿಷ್ಕರಿಸಿರುವ ಅಂದಾಜು ಪಟ್ಟಿಯನ್ನು ಸಲ್ಲಿಸುತ್ತಾ, 2008–09ನೇ ಸಾಲಿನ ಲೋಕೋಪಯೋಗಿ ಇಲಾಖೆಯ ಅಪೆಂಡಿಕ್ಸ್–`ಇ` ನಲ್ಲಿ ರೂ.10.00 ಲಕ್ಷ ಅಂದಾಜು ಮೊತ್ತಕ್ಕೆ ರೂ.3.00 ಲಕ್ಷಗಳ ಅನುದಾನವನ್ನು ಒದಗಿಸಿರುವುದರಿಂದ, ಲೋಕೋಪಯೋಗಿ ಇಲಾಖೆಯ ಅಭಿಯಂತರರು ಸಲ್ಲಿಸಿರುವ ರೂ.10.00 ಲಕ್ಷಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ನಂ. ಒಇ 598 ಪಿಪಿಇ 2007, ಬೆಂಗಳೂರು, ದಿನಾಂಕ 3ನೇ ಮಾರ್ಚ್ 2009**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ, ಉತ್ತರ ಕನ್ನಡ ಜಿಲ್ಲೆ ಯಲ್ಲಾಪುರದ ಗ್ರಾಮದ ಸರ್ವೆ ನಂ.4ಅ1ಅ1ಅ1 ರಲ್ಲಿ ಪ್ಲಾಟ್ ನಂ. 861, 862, 863 ಮತ್ತು 865 ರಲ್ಲಿ ಹನ್ನೆರಡು ಗುಂಟೆ ನಿವೇಶನದಲ್ಲಿ ಸಹಾಯಕ ಸರ್ಕಾರಿ ಅಭಿಯೋಜಕರ ವಸತಿ ಗೃಹವನ್ನು ನಿರ್ಮಾಣದ ಕಾಮಗಾರಿಗಾಗಿ 2008–09ನೇ ಸಾಲಿನ ಆಯವ್ಯಯದ ಅಪೆಂಡಿಕ್ಸ್–`ಇ` ನಲ್ಲಿ ರೂ.3.00 (ಮೂರು ಲಕ್ಷ ರೂಪಾಯಿಗಳು) ಲಕ್ಷಗಳ ಅನುದಾನವನ್ನು ಸೇರ್ಪಡೆ ಮಾಡಿದ್ದು, ಸದರಿ ಕಾಮಗಾರಿಯ ಕೆಲಸವನ್ನು ಪ್ರಾರಂಭಿಸಲು ಮತ್ತು ಸಹಾಯಕ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಉಪವಿಭಾಗ, ಯಲ್ಲಾಪುರ, ಉತ್ತರ ಕನ್ನಡ ಜಿಲ್ಲೆ ಇವರು ತಯಾರಿಸಿರುವ ರೂ.10.00 (ಹತ್ತು ಲಕ್ಷ ರೂಪಾಯಿಗಳು) ಲಕ್ಷಗಳ ಪರಿಷ್ಕರಿಸಿ ಸಲ್ಲಿಸಿರುವ ಅಂದಾಜು ಪಟ್ಟಿಗೆ ಸರ್ಕಾರವು ಆಡಳಿತಾತ್ಮಕ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಒಸಾಇ 7693 ಆಂಆಸ 2009 ದಿನಾಂಕ:07.02.2009ರ ಸಹಮತಿ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಆಇ 1 ಟಿಎಫ್‌ಪಿ 1996, ದಿನಾಂಕ:10.07.1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಸಿ. ಸಿದ್ದಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ
(ಕಾ ಮತ್ತು ಸು, ಕಾಫಿಪೋಸಾ ಮತ್ತು ಅಭಿಯೋಗಗಳು)

ಪಿ.ಆರ್. 827

**ವಿಷಯ:** ಶ್ರೀ ಬಸಲಿಂಗಪ್ಪ ಮುತ್ತಪ್ಪ ಭಿಷ್ಠಗೊಂಡ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಹುನಗುಂದ ಇವರು ಪರಿವೀಕ್ಷಣಾ ಅವಧಿಯನ್ನು ಘೋಷಿಸುವ ಕುರಿತು.

**ಓದಲಾಗಿದೆ:** 1) ಸರ್ಕಾರದ ಅಧಿಸೂಚನೆ ನಂ. ಒಇ 845 ಪಿಪಿಇ 2005, ದಿನಾಂಕ 03.05.2006.

2) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ನಂ. ಡಿಪಿಎನ್ / ಸಿಶಾ.1 / 37 (02) / 2008–09, ದಿನಾಂಕ 18.12.2008.

**ಪ್ರಸ್ತಾವನೆ:**

ಶ್ರೀ ಬಸಲಿಂಗಪ್ಪ ಮುತ್ತಪ್ಪ ಭಿಷ್ಠಗೊಂಡ ಅವರು ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನೇರ ನೇಮಕಾತಿ ಮೂಲಕ ಆಯ್ಕೆಯಾಗಿದ್ದು, ಮೇಲೆ ಓದಲಾದ (1)ರ ಅಧಿಸೂಚನೆ ದಿನಾಂಕ 03.05.2006ರ ಕ್ರ.ಸಂ. 02ರನ್ವಯ ದಿನಾಂಕ 12.05.2006ರ ಪೂರ್ವಾಹ್ನದಂದು ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್ ನ್ಯಾಯಾಲಯ, ಹುನಗುಂದ ಇಲ್ಲಿ ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಸದರಿ ಅಧಿಕಾರಿಯವರು ದಿನಾಂಕ 11.05.2008ಕ್ಕೆ ಎರಡು ವರ್ಷಗಳ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆ. ಸಹಾಯಕ ಸರ್ಕಾರಿ ಅಭಿಯೋಜಕರ ಹುದ್ದೆಗೆ ನಿಗಧಿಪಡಿಸಲಾಗಿರುವ ಇಲಾಖಾ ಪರೀಕ್ಷೆಗಳಾದ ಅಕೌಂಟ್ಸ್ ಹೈಯರ್ ಮತ್ತು ಜನರಲ್ ಲಾ ಭಾಗ–1 ಪತ್ರಿಕೆ–2ರಲ್ಲಿ ಸದರಿ ಅಧಿಕಾರಿಯವರು ಪರಿವೀಕ್ಷಣಾ ಅವಧಿಯಲ್ಲಿ ತೇರ್ಗಡೆ ಹೊಂದಿರುತ್ತಾರೆ. ಇವರು ಎಸ್.ಎಸ್.ಎಲ್.ಸಿ ಪರೀಕ್ಷೆಯಲ್ಲಿ ಕನ್ನಡವನ್ನು ಮಾಧ್ಯಮವನ್ನಾಗಿ ಅಭ್ಯಸಿಸಿರುವ ಕಾರಣ, ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣಗಾಗುವುದಕ್ಕೆ ವಿನಾಯಿತಿ ನೀಡಲಾಗಿದೆ.

ಸದರಿ ಅಧಿಕಾರಿಯವರಿಗೆ ಸಂಬಂಧಪಟ್ಟಂತೆ 2006–07 ಮತ್ತು 2007–08ನೇ ಸಾಲಿನ ವಾರ್ಷಿಕ ಕಾರ್ಯನಿರ್ವಹಣಾ ವರದಿಗಳಲ್ಲಿ ಸದರಿ ಅಧಿಕಾರಿಯವರ ವಿರುದ್ಧ ಯಾವುದೇ ವ್ಯತಿರಿಕ್ತ ಷರಾ ಇರುವುದಿಲ್ಲ. ಪರಿವೀಕ್ಷಣಾ ಅವಧಿಯಲ್ಲಿ ಯಾವುದೇ ವೇತನ ರಹಿತ ರಜೆಯನ್ನು ಪಡೆದಿರುವುದಿಲ್ಲ ಹಾಗೂ ಇಲಾಖಾ ಅವಕೃಪೆಗೆ ಒಳಗಾಗಿರುವುದಿಲ್ಲ. ಅಧಿಕಾರಿಯ ವಿರುದ್ಧ ಯಾವುದೇ ಇಲಾಖಾ ವಿಚಾರಣೆಯನ್ನು ಹೂಡಿರುವುದಿಲ್ಲ ಮತ್ತು ಸದ್ಯದ ಪರಿಸ್ಥಿತಿಯಲ್ಲಿ ಹೂಡುವ ಅವಶ್ಯಕತೆಯು ಇರುವುದಿಲ್ಲ.

ಆದುದರಿಂದ ಶ್ರೀ ಬಸಲಿಂಗಪ್ಪ ಮುತ್ತಪ್ಪ ಭಿಷ್ಠಗೊಂಡ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹುನಗುಂದ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 5(1)(ಎ)ರ ಅನುಸಾರ ದಿನಾಂಕ 12.05.2008ರಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವಂತೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ ಓದಲಾದ (2)ರ ಪತ್ರ ದಿನಾಂಕ 18.12.2008ರಲ್ಲಿ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ನಂ. ಒಇ 548 ಪಿಪಿಇ 2008, ಬೆಂಗಳೂರು, ದಿನಾಂಕ: 18ನೇ ಫೆಬ್ರವರಿ 2009**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಶ್ರೀ ಬಸಲಿಂಗಪ್ಪ ಮುತ್ತಪ್ಪ ಭಿಷ್ಠಗೊಂಡ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಹುನಗುಂದ ಇವರ ಪರಿವೀಕ್ಷಣಾ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು, 1977ರ ನಿಯಮ 5(1)(ಎ)ರ ಅನುಸಾರ ದಿನಾಂಕ 12.05.2008ರ ಪೂರ್ವಾಹ್ನದಿಂದ ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಸರ್ಕಾರವು ಘೋಷಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಸಿ. ಸಿದ್ದಪ್ಪ**

ಪಿ.ಆರ್. 707

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ, ಕಾಫಿಪೋಸಾ ಮತ್ತು ಅಭಿಯೋಗಗಳು)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನದಡಿ, ವಿವಿಧ ಹಂತಗಳಲ್ಲಿ "ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್" ಸಮಿತಿಗಳ ರಚನೆ, ವ್ಯವಸ್ಥಾಪನೆ ಮತ್ತು ಅವುಗಳ ಜವಾಬ್ದಾರಿ.

**ಉಲ್ಲೇಖ:** (1) ಸರ್ಕಾರಿ ಆದೇಶ ಸಂಖ್ಯೆ: ಆ.ಕು.ಕ.146.ಎಫ್.ಪಿ.ಆರ್.2007, ಬೆಂಗಳೂರು, ದಿನಾಂಕ: 21.02.2008.

(2) ಸರ್ಕಾರಿ ಆದೇಶ ಸಂಖ್ಯೆ: ಆ.ಕು.ಕ.75.ಎಫ್.ಪಿ.ಆರ್.2008, ಬೆಂಗಳೂರು, ದಿನಾಂಕ: 27.06.2008.

(3) ಸರ್ಕಾರಿ ಆದೇಶ ಸಂಖ್ಯೆ: ಆ.ಕು.ಕ.201.ಸಿ.ಜಿ.ಇ. 2005, ಬೆಂಗಳೂರು, ದಿನಾಂಕ: 05.07.2005.

(4) ರಾಜ್ಯ ಸಮುದಾಯ ಮಾನಿಟರಿಂಗ್ ಸಮಿತಿಯ ಸಭಾ ನಡಾವಳಿ ದಿನಾಂಕ: 23.10.2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ರಾಜ್ಯ ಮಟ್ಟದಲ್ಲಿ ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನದ ಅನುಷ್ಠಾನಕ್ಕೆ ಸಂಬಂಧಿಸಿದಂತೆ, ರಾಜ್ಯ ಸಮುದಾಯ ಮಾನಿಟರಿಂಗ್ ಸಮಿತಿಯನ್ನು ರಚಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (2) ರಲ್ಲಿ ಗದಗ, ರಾಯಚೂರು, ತುಮಕೂರು ಹಾಗೂ ಚಾಮರಾಜನಗರ ಜಿಲ್ಲೆಗಳಲ್ಲಿ ಸಮುದಾಯ ಮಾನಿಟರಿಂಗ್ ಪ್ರಾಯೋಗಿಕ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಈಗಾಗಲೇ ಅಸ್ಥಿತ್ವದಲ್ಲಿರುವ ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ ಸಮಿತಿಗಳನ್ನು ಒಳಗೊಂಡಂತೆ, ಪ್ರಾಥಮಿಕ ಆರೋಗ್ಯ ಕೇಂದ್ರ, ಯೋಜನಾ ಮತ್ತು ಮಾನಿಟರಿಂಗ್ ಸಮಿತಿ, ಸಮುದಾಯ ಆರೋಗ್ಯ ಕೇಂದ್ರ, ಯೋಜನಾ ಮತ್ತು ಮಾನಿಟರಿಂಗ್ ಸಮಿತಿ ಹಾಗೂ ಜಿಲ್ಲಾಮಟ್ಟದ ಮಾನಿಟರಿಂಗ್ ಸಮಿತಿಗಳನ್ನು ರಚಿಸಿ, ಆದೇಶ ಹೊರಡಿಸಲಾಗಿದೆ. ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ ಸಮಿತಿಗಳ ರಚನೆ ಮತ್ತು ಅವುಗಳ ಜವಾಬ್ದಾರಿಗಳನ್ನು ಕುರಿತಂತೆ ಆದೇಶ ಹೊರಡಿಸಲಾಗಿರುತ್ತದೆ. ಮೇಲೆ ಓದಲಾದ ಕ್ರಮ ಸಂಖ್ಯೆ (4)ರಲ್ಲಿ ಉಲ್ಲೇಖಿಸಿದ ಸಭಾ ನಡವಳಿಯಲ್ಲಿ ಈಗಾಗಲೇ ಅಸ್ಥಿತ್ವದಲ್ಲಿರುವ ಮಾನಿಟರಿಂಗ್ ಸಮಿತಿಗಳ ಪುನರ್ ರಚನೆ ಬಗ್ಗೆ ತೀರ್ಮಾನಿಸಲಾಗಿದೆ.

ಸಮುದಾಯ ಮಾನಿಟರಿಂಗ್ ಕಾರ್ಯಕ್ರಮವನ್ನು ರಾಜ್ಯಾದ್ಯಂತ ಇನ್ನೂ ಹೆಚ್ಚು ಸಮರ್ಪಕವಾಗಿ ಅನುಷ್ಠಾನಗೊಳಿಸಲು ಉದ್ದೇಶಿಸಿದ್ದು, ಅವುಗಳಿಗೆ ವಿವಿಧ ಹಂತಗಳಲ್ಲಿ ಪ್ರಾತಿನಿಧ್ಯ ಹಾಗೂ ನಿರ್ಧಿಷ್ಟವಾದ ಜವಾಬ್ದಾರಿಗಳನ್ನು ನಿಗಧಿಪಡಿಸುವ ಅವಶ್ಯಕತೆಯನ್ನು ಮನಗಾಣಲಾಗಿರುತ್ತದೆ. ಆದುದರಿಂದ ಕ್ರಮ ಸಂಖ್ಯೆ 2 ರಲ್ಲಿ ಉಲ್ಲೇಖಿಸಲಾದ ಆದೇಶಕ್ಕೆ ಪೂರಕವಾಗಿ ಈ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 17 ಎಫ್‌ಪಿಆರ್ 2009, ಬೆಂಗಳೂರು, ದಿನಾಂಕ: 26ನೇ ಫೆಬ್ರವರಿ 2009.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನಲೆಯಲ್ಲಿ ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನದ ಕಾರ್ಯಚಟುವಟಿಕೆಗಳ ಗುಣಾತ್ಮಕ ಅನುಷ್ಠಾನಕ್ಕಾಗಿ ಸಮುದಾಯ ಮಾನಿಟರಿಂಗ್ ಕಾರ್ಯಕ್ರಮವನ್ನು ರಾಜ್ಯಾದ್ಯಂತ ನಡೆಸುವ ಉದ್ದೇಶದಿಂದ ಗ್ರಾಮ ಅರೋಗ್ಯ ಯೋಜನೆ ಮತ್ತು ಮಾನಿಟರಿಂಗ್/ ಗ್ರಾಮ ಆರೋಗ್ಯ ನೈರ್ಮಲ್ಯ ಸಮಿತಿ, ಪ್ರಾಥಮಿಕ ಆರೋಗ್ಯ ಕೇಂದ್ರ ಯೋಜನೆ ಮತ್ತು ಮಾನಿಟರಿಂಗ್ ಸಮಿತಿ, ತಾಲ್ಲೂಕು ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿ, ಜಿಲ್ಲಾ ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಗಳನ್ನು ಮತ್ತು ತಾಲ್ಲೂಕು ಹಾಗೂ ಜಿಲ್ಲಾಮಟ್ಟದ ಕಾರ್ಯಕಾರಿ ಸಮಿತಿಗಳನ್ನು ಕೆಳಗೆ ನಮೂದಿಸಿರುವ ಜವಾಬ್ದಾರಿಗಳೊಂದಿಗೆ ಪುನರ್‌ರಚಿಸಲು /ರಚಿಸಲು ಆದೇಶಿಸಿದೆ.

**ಅ. ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ ಸಮಿತಿ/ಗ್ರಾಮ ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿ:**

**ಅ.1** ಗ್ರಾಮ ಮಟ್ಟದಲ್ಲಿ ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ ಸಮಿತಿಯು ಗ್ರಾಮ ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಯೂ ಆಗಿ ಕೆಲಸ ನಿರ್ವಹಿಸತಕ್ಕದ್ದು.

**ಅ.2. ರಚನೆ:**

**ಅ.2.1. ಸಾಮಾನ್ಯ ಸದಸ್ಯರ ಆಯ್ಕೆ :**

ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ/ಗ್ರಾಮ ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಯು, ಗ್ರಾಮಸಭೆಯಿಂದ ಆಯ್ಕೆಯಾದ 15 ಜನ ಸದಸ್ಯರನ್ನು ಹೊಂದಿರಬೇಕು. ಇವರಲ್ಲಿ ಕನಿಷ್ಠ 8 ಸದಸ್ಯರು ಮಹಿಳೆಯರಾಗಿದ್ದು, ಅವರಲ್ಲಿ ಕನಿಷ್ಠ ಮೂವರು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದವರು ಮತ್ತು ಇಬ್ಬರು ಸ್ವಸಹಾಯ ಗುಂಪಿನ ಸದಸ್ಯರಾಗಿರಬೇಕು. 15 ರಲ್ಲಿ 8 ನ್ನು ಕಳೆದು ಉಳಿದ 7 ಸದಸ್ಯರ ಪೈಕಿ ಕನಿಷ್ಠ ಇಬ್ಬರು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸೇರಿದವರಾಗಿರತಕ್ಕದ್ದು.

**ಅ.2.2. ಪದನಿಮಿತ್ತ ಸದಸ್ಯರು:**

ಆಯಾ ಗ್ರಾಮಕ್ಕೆ ಸಂಬಂದಿಸಿದ ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಕಿರಿಯ ಪುರುಷ ಆರೋಗ್ಯ ಸಹಾಯಕ, ಪ್ರಾಥಮಿಕ ಶಾಲಾ ಶಿಕ್ಷಕರು (ಮಹಿಳೆಯರಿಗೆ ಆದ್ಯತೆ), ಗ್ರಾಮದಲ್ಲಿರುವ ಎಲ್ಲಾ ಅಂಗನವಾಡಿ ಕಾರ್ಯಕರ್ತೆಯರು ಮತ್ತು ಆಶಾ ಕಾರ್ಯಕರ್ತೆಯರು ಸಮಿತಿಯ ಪದನಿಮಿತ್ತ ಸದಸ್ಯರುಗಳಾಗಿರುತ್ತಾರೆ.

**ಅ.2.3. ಸಮಿತಿಯ ಅಧ್ಯಕ್ಷರು:**

**ಅ.2.3.1**. ಸ್ಥಳೀಯ ಗ್ರಾಮ ಪಂಚಾಯತಿ ಸದಸ್ಯರು ಮಾತ್ರ ಗ್ರಾಮ ಆರೋಗ್ಯ ನೈರ್ಮಲ್ಯ/ಗ್ರಾಮ ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಯ ಪದನಿಮಿತ್ತ ಅಧ್ಯಕ್ಷರಾಗಿರತಕ್ಕದ್ದು.

**ಅ.2.3.2**. ಅಂತಹ ಸದಸ್ಯರು ಈಗಾಗಲೇ ಸ್ಥಳೀಯ ಗ್ರಾಮ ಪಂಚಾಯತಿಯ ಅಧ್ಯಕ್ಷರಾಗಿದ್ದ ಪಕ್ಷದಲ್ಲಿ, ಅವರೇ ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ/ಗ್ರಾಮ ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಯ ಅಧ್ಯಕ್ಷರಾಗಿರತಕ್ಕದ್ದು.

**ಅ.2.3.3**. ಗ್ರಾಮ ಪಂಚಾಯತಿ ಅಧ್ಯಕ್ಷರು, ಸ್ಥಳೀಯ ಗ್ರಾಮದ ನಿವಾಸಿಯಾಗಿರದಿದ್ದ ಪಕ್ಷದಲ್ಲಿ ಗ್ರಾಮದವರೇ ಆದ ಮತ್ತೋರ್ವ ಪಂಚಾಯತಿ ಸದಸ್ಯರು ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ ಸಮಿತಿ/ ಗ್ರಾಮ ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಯ ಪದನಿಮಿತ್ತ ಅಧ್ಯಕ್ಷರಾಗಿರತಕ್ಕದ್ದು.

**ಅ.2.3.4**. ಪರಂತು ಸದರಿ ಗ್ರಾಮದಲ್ಲಿ ಒಬ್ಬರಿಗಿಂತ ಹೆಚ್ಚು ಗ್ರಾಮ ಪಂಚಾಯತಿ ಸದಸ್ಯರಿದ್ದ ಸಂದರ್ಭದಲ್ಲಿ ಒಬ್ಬರನ್ನು ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ ಸಮಿತಿ/ ಗ್ರಾಮ ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಯ, ಅಧ್ಯಕ್ಷರನ್ನಾಗಿ ಸ್ಥಳೀಯ ಗ್ರಾಮ ಪಂಚಾಯತಿಯು ನಾಮ ನಿರ್ದೇಶನ ಮಾಡತಕ್ಕದ್ದು.

**ಅ.2.3.5**. ಪರಂತು ಗ್ರಾಮ ಪಂಚಾಯತಿಯು ಯಾವುದೇ ಕಾರಣದಿಂದ ನಾಮ ನಿರ್ದೇಶನ ಮಾಡಲು ವಿಫಲವಾದ ಪಕ್ಷದಲ್ಲಿ ಸ್ಥಳೀಯ ತಾಲ್ಲೂಕು ಪಂಚಾಯತಿಯ ಕಾರ್ಯ ನಿರ್ವಾಹಕ ಅಧಿಕಾರಿಯು ಅಂತಹ ಗ್ರಾಮದ, ಗ್ರಾಮ ಪಂಚಾಯತಿ ಸದಸ್ಯರಲ್ಲಿ ಅರ್ಹ ಒಬ್ಬರನ್ನು ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ ಸಮಿತಿ/ ಗ್ರಾಮ ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಯ, ಅಧ್ಯಕ್ಷರನ್ನಾಗಿ ನಾಮ ನಿರ್ದೇಶನ ಮಾಡತಕ್ಕದ್ದು.

**ಅ.2.3.6**. ಇಂತಹ ಸಂದರ್ಭದಲ್ಲಿ ತಾಲ್ಲೂಕು ಪಂಚಾಯತಿ ಕಾರ್ಯ ನಿರ್ವಾಹಕ ಅಧಿಕಾರಿಯ ತೀರ್ಮಾನವೇ ಅಂತಿಮವಾಗಿರತಕ್ಕದ್ದು.

**ಅ.2.4. ಸಮಿತಿಯ ಕಾರ್ಯದರ್ಶಿ :**

ಸ್ಥಳೀಯ ಗ್ರಾಮದ ಆಶಾ ಕಾರ್ಯಕರ್ತೆಯು ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ/ಗ್ರಾಮ ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಯ ಸದಸ್ಯ ಕಾರ್ಯದರ್ಶಿಯಾಗಿರುತ್ತಾರೆ. ಆಶಾ ಇಲ್ಲದ ಸ್ಥಳಗಳಲ್ಲಿ ಅಂಗನವಾಡಿ ಕಾರ್ಯಕರ್ತೆ ಸದಸ್ಯ ಕಾರ್ಯದರ್ಶಿಯಾಗಿರುತ್ತಾರೆ. ಒಬ್ಬರಿಗಿಂತ ಹೆಚ್ಚು ಆಶಾ ಅಥವಾ ಅಂಗನವಾಡಿ ಕಾರ್ಯಕರ್ತೆಯರಿದ್ದರೆ, ಹಿರಿತನ ಮತ್ತು ಅರ್ಹತೆಯ ಮೇಲೆ ಒಬ್ಬರನ್ನು ಕಾರ್ಯದರ್ಶಿಯನ್ನಾಗಿ ಆಯ್ಕೆ ಮಾಡುವ ಅಧಿಕಾರವನ್ನು ಸ್ಥಳೀಯ ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ/ಗ್ರಾಮ ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಗೆ ನೀಡಲಾಗಿದೆ.

**ಅ.2.5. ಸದಸ್ಯತ್ವದ ಅವಧಿ:**

ಗ್ರಾಮ ಸಭೆಯಿಂದ ಆಯ್ಕೆಯಾದ 15 ಸದಸ್ಯರ ಪೈಕಿ 1/3 ಭಾಗ ಲಾಟರಿ ಎತ್ತುವುದರ ಮೂಲಕ ಮೊದಲನೇ ವರ್ಷದ ಅಂತ್ಯದಲ್ಲಿ ನಿವೃತ್ತರಾಗತಕ್ಕದ್ದು. ಅವರ ಸ್ಥಾನಕ್ಕೆ ಗ್ರಾಮ ಸಭೆಯಿಂದ 5 ಜನ ಹೊಸ ಸದಸ್ಯರ ಆಯ್ಕೆಯಾಗತಕ್ಕದ್ದು. ಹೀಗೆಯೇ 2 ಮತ್ತು 3 ನೇ ವರ್ಷಾಂತ್ಯಕ್ಕೆ ಉಳಿದ 5+5 ಸದಸ್ಯರು ಲಾಟರಿ ಮೂಲಕ ನಿರ್ಣಯಿಸಿ ನಿವೃತ್ತರಾಗತಕ್ಕದ್ದು ಮತ್ತವರ ಸ್ಥಾನಕ್ಕೆ ಹೊಸ ಸದಸ್ಯರ ಆಯ್ಕೆ ಗ್ರಾಮ ಸಭೆ ಮುಖಾಂತರ ಆಗತಕ್ಕದ್ದು. ಯಾವ ಮೀಸಲಾತಿ ಸದಸ್ಯರು ನಿವೃತ್ತರಾಗಿರುತ್ತಾರೋ ಅದೇ ಮೀಸಲಾತಿ ಸದಸ್ಯರು ಗ್ರಾಮ ಸಭೆಯಿಂದ ಆಯ್ಕೆಯಾಗತಕ್ಕದ್ದು. ನಿವೃತ್ತರಾದವರನ್ನು ಮರು ಆಯ್ಕೆ ಮಾಡುವ ವಿವೇಚನೆ ಗ್ರಾಮ ಸಭೆಗಿರುತ್ತದೆ. ಆದರೆ ಗ್ರಾಮದಲ್ಲಿರುವ ಉಳಿದ ಎಲ್ಲಾ ಅರ್ಹ ವ್ಯಕ್ತಿಗಳಿಗೂ ಸಮಿತಿಯಲ್ಲಿ ಪಾಲ್ಗೊಳ್ಳುವ ಅವಕಾಶ ಕಲ್ಪಿಸುವ ಉದ್ದೇಶವನ್ನು ಗ್ರಾಮಸಭೆಯು ಗಮನದಲ್ಲಿಡಬೇಕು. ಪ್ರತಿ ವರ್ಷ 1/3 ಭಾಗದ ಸದಸ್ಯರ ನಿವೃತ್ತಿ ಮತ್ತು ಆಯ್ಕೆ ಪುನರಾವರ್ತನೆಯಾಗತಕ್ಕದ್ದು. ನಿವೃತ್ತಿಯಾದ ಸದಸ್ಯರು ಮೇಲ್ಮಟ್ಟದ ಸಮಿತಿಗಳಿಗೆ ಪ್ರಾತಿನಿಧಿತ್ವದ ನೇಮಕಾತಿಯಾಗಿದ್ದರೆ ಆ ಸ್ಥಾನಕ್ಕೆ ಹೊಸದಾಗಿ ಆಯ್ಕೆಯಾದ ಸದಸ್ಯರು ಬದಲಿ ನೇಮಕವಾಗತಕ್ಕದ್ದು. ಪ್ರತಿ ವರ್ಷ ಸದಸ್ಯರ ನಿವೃತ್ತಿ ಮತ್ತು ಆಯ್ಕೆ ಪ್ರಕ್ರಿಯೆಯ ಮೇಲ್ವಿಚಾರಣೆಯನ್ನು ಸ್ಥಳೀಯ ಗ್ರಾಮ ಪಂಚಾಯತಿ ಕಾರ್ಯದರ್ಶಿ ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರದ ವೈದ್ಯಾಧಿಕಾರಿಗಳು ಜಂಟಿಯಾಗಿ ಮಾಡತಕ್ಕದ್ದು.

**ಅ.3. ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ / ಗ್ರಾಮ ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಯ ಜವಾಬ್ದಾರಿಗಳು:**

**ಅ.3.1**. ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ/ ಗ್ರಾಮ ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಗಳು ಪ್ರತೀ ವರ್ಷ ಆಯಾ ಗ್ರಾಮದ ಆರೋಗ್ಯ ಯೋಜನೆ ಮತ್ತು ಮಾಸಿಕ ಗ್ರಾಮ ವರದಿ ಕಾರ್ಡ್‌ನ್ನು ತಯಾರಿಸಿ, ಕ್ಷೇತ್ರದ ಪ್ರಾಥಮಿಕ ಆರೋಗ್ಯ ಕೇಂದ್ರದ ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಗೆ ಸಲ್ಲಿಸತಕ್ಕದ್ದು. ಇದಲ್ಲದೇ ಸಮಿತಿಯು ಈ ಕೆಳಗಿನ ಜವಾಬ್ದಾರಿ ಹೊಂದಿರುತ್ತದೆ.

**ಅ.3.1.1**. ಭಾರತ ಸರ್ಕಾರದ ಮಾರ್ಗಸೂಚಿಯನ್ವಯ ಸಮುದಾಯ ಮಾನಿಟರಿಂಗ್ ಕಾರ್ಯಗಳನ್ನು ಅರ್ಥಪೂರ್ಣವಾಗಿ ಅನುಷ್ಠಾನಗೊಳಿಸುವುದು.

**ಅ.3.1.2**. 3 ತಿಂಗಳಿಗೊಂದು ಬಾರಿ ಅಂದರೆ ವರ್ಷದಲ್ಲಿ 4 ಸಾರಿ ಗ್ರಾಮದಲ್ಲಿ ಆರೋಗ್ಯ ಜನಸಂವಾದ ಕಾರ್ಯಕ್ರಮವನ್ನು ಹಮ್ಮಿಕೊಳ್ಳತಕ್ಕದ್ದು. ಮತ್ತು ಇದರಲ್ಲಿ ಆರೋಗ್ಯ ಇಲಾಖೆ ಸೇವೆ ಮತ್ತು ಕೊರತೆಗಳ ಬಗ್ಗೆ ಸಾರ್ವಜನಿಕರಿಂದ ಅಭಿಪ್ರಾಯಪಡೆದು, ಸೇವೆಗಳನ್ನು ಉತ್ತಮಪಡಿಸುವಲ್ಲಿ ಸ್ಥಳೀಯವಾಗಿ ಕಾರ್ಯೋನ್ಮುಖರಾಗುವುದು.

**ಅ.3.1.3**. ಜನರಿಗೆ ಆರೋಗ್ಯ ಕಾರ್ಯಕ್ರಮ, ಆರೋಗ್ಯ ಹಕ್ಕುಗಳ ಬಗ್ಗೆ ಅರಿವು ಮೂಡಿಸುವುದು.

**ಅ.3.1.4**. ಗ್ರಾಮದ ಪರಿಸ್ಥಿತಿಗೆ, ಅವಶ್ಯಕತೆಗೆ ಅನುಗುಣವಾಗಿ ಗ್ರಾಮ ಆರೋಗ್ಯ ಯೋಜನೆ ತಯಾರಿಸುವುದು.

**ಅ.3.1.5**. ಗ್ರಾಮ ಆರೋಗ್ಯ ಮತ್ತು ಪೋಷಕಾಂಶಗಳ ಬಗ್ಗೆ ಚಾಲ್ತಿಯಲ್ಲಿರುವ ಚಟುವಟಿಕೆಗಳ ವಿಶ್ಲೇಷಣೆ ಮಾಡುವುದು ಮತ್ತದರ ಪ್ರಗತಿಯ ಬಗ್ಗೆ ಸಂಬಂಧಪಟ್ಟ ಕಾರ್ಯಕರ್ತರುಗಳಿಗೆ/ ಅಧಿಕಾರಿಗಳಿಗೆ ಮಾಹಿತಿ ಪೂರೈಸುವುದು.

**ಅ.3.1.6**. ಗ್ರಾಮದ ವಾರ್ಷಿಕ ಆರೋಗ್ಯ ವರದಿಯನ್ನು ಗ್ರಾಮ ಸಭೆಯಲ್ಲಿ ಮಂಡಿಸುವುದು.

**ಅ.3.1.7**. ಗ್ರಾಮದ ಆರೋಗ್ಯದ ಸ್ಥಿತಿಗತಿ ಬಗ್ಗೆ ಗುಣಾತ್ಮಕ ಮತ್ತು ಪ್ರಮಾಣಾತ್ಮಕ ಮಾಹಿತಿಯನ್ನು ಪ್ರಾಥಮಿಕ ಆರೋಗ್ಯ ಕೇಂದ್ರದ ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಗೆ ಸಲ್ಲಿಸುವುದು.

**ಅ.3.1.8**. ಗ್ರಾಮದ ಆರೋಗ್ಯ ದಾಖಲೆಯ ಸೂಚ್ಯಂಕಗಳ ಮತ್ತು ಆರೋಗ್ಯ ಮಾಹಿತಿ ಫಲಕದ ನಿರ್ವಹಣೆ ಮಾಡಬೇಕು. ದಾಖಲೆ ಮತ್ತು ಫಲಕಗಳಲ್ಲಿ, ಸಾರ್ವಜನಿಕರಿಗೆ ದೊರುಕುವ ಸೇವೆಗಳಾದ ಗರ್ಭಿಣಿ ಆರೈಕೆ ಮತ್ತು ಪ್ರಸೂತಿ ಸೌಲಭ್ಯ, ನವಜಾತ ಶಿಶುಗಳ ಆರೈಕೆ, ಲಸಿಕೆ, ಪೌಷ್ಟಿಕಾಂಶ, ಮುಂತಾದವುಗಳ ಬಗ್ಗೆ ಮಾಹಿತಿಯೂ ಅಲ್ಲದೆ, ಸಾಂಕ್ರಾಮಿಕ ಮತ್ತು ಜೀವನ ಶೈಲಿ ಆಧಾರಿತ ಕಾಯಿಲೆಗಳಿಂದ ನರಳುತ್ತಿರುವ ಜನರಿಗೆ ದೊರಕುವ ಚಿಕಿತ್ಸಾ ಸೇವೆಗಳ ಬಗ್ಗೆ ಹಾಗೂ ಮಡಿಲು, ಜನನಿ ಸುರಕ್ಷಾ ಯೋಜನೆ, ಪ್ರಸೂತಿ ಆರೈಕೆ, ತಾಯಿ ಭಾಗ್ಯ, ಇತ್ಯಾದಿ ಜನಪರ ಕಾರ್ಯಕ್ರಮಗಳ ಬಗ್ಗೆ ಸಂಪೂರ್ಣ ಮಾಹಿತಿ ಒದಗಿಸುವುದು ಮತ್ತು ಕಾಲ ಕಾಲಕ್ಕೆ ನವೀಕರಿಸತಕ್ಕದ್ದು. ಆರೋಗ್ಯ ಕಾರ್ಯಕರ್ತರು ಹಳ್ಳಿಗೆ ಭೇಟಿ ನೀಡುವ ದಿನ,ದೊರಕುವ ಸ್ಥಳ ಮುಂತಾದವುಗಳ ಬಗ್ಗೆ ಕೂಡ ಮಾಹಿತಿ ಒದಗಿಸುವುದು.

**ಅ.3.1.9**. ನಿಗದಿತ ದಿನಗಳಲ್ಲಿ ಆರೋಗ್ಯ ಕಾರ್ಯಕರ್ತರು ಹಳ್ಳಿಗಳಿಗೆ ಭೇಟಿ ನೀಡಿ ಪೂರ್ಣ ಆರೋಗ್ಯ ಸೇವೆಗಳನ್ನು ಒದಗಿಸುವಂತೆ ನೋಡಿಕೊಳ್ಳುವುದು.

**ಅ.3.1.10**. ಹೆಣ್ಣು ಬ್ರೂಣಹತ್ಯೆಗೆ ಕಾರಣವಾಗುವ ಸಾಮಾಜಿಕ ಆಯಾಮಗಳ ಬಗ್ಗೆ ಜನಜಾಗೃತಿ ಅಭಿಯಾನವನ್ನು ಹಮ್ಮಿಕೊಳ್ಳುವುದು.

**ಅ.3.1.11. ಮುಕ್ತನಿಧಿ ಬಳಕೆ:** ಕಾಲಕಾಲಕ್ಕೆ ರಾಜ್ಯ ಸರ್ಕಾರಕ್ಕೆ ಕೊಟ್ಟಿರುವ ಮಾರ್ಗಸೂಚಿ ಪ್ರಕಾರ ಮುಕ್ತ ನಿಧಿಯನ್ನು ಬಳಕೆ ಮಾಡುವುದು ಹಾಗೂ ಅವುಗಳ ಲೆಕ್ಕ ಪ್ರತಿ ತಿಂಗಳು ಪ್ರಾಥಮಿಕ ಆರೋಗ್ಯ ಕೇಂದ್ರದ ವೈದ್ಯಾಧಿಕಾರಿಗಳಿಗೆ ಸಲ್ಲಿಸತಕ್ಕದ್ದು, ಹಾಗೂ ಅದರ ಒಂದು ಪ್ರತಿಯನ್ನು ಗ್ರಾಮ ಪಂಚಾಯಿತಿಗೆ ಸಲ್ಲಿಸತಕ್ಕದ್ದು.

**ಅ.3.2**. ಪ್ರತಿ ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ/ಗ್ರಾಮ ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಯು ಊರೊಟ್ಟಿನ ಕೆಲಸಕ್ಕಾಗಿ, ಸಂಸ್ಥೆಗಳಿಂದ, ಪಂಚಾಯತಿಯಿಂದ, ದಾನಿಗಳಿಂದ ನಗದು ಅಥವಾ ವಸ್ತುಗಳ ರೂಪದಲ್ಲಿ ವಂತಿಗೆ/ದೇಣಿಗೆಯನ್ನು ಸಂಗ್ರಹಿಸಬಹುದು.

**ಅ.4. ಸಮಿತಿಯ ಸಭೆ :**

**ಅ.4.1**. ಪ್ರತಿ ತಿಂಗಳಿಗೊಮ್ಮೆ ಕಡ್ಡಾಯವಾಗಿ ಮೊದಲನೇ ಸೋಮವಾರದಂದು ಅಪರಾಹ್ನ ಸಮಿತಿಯು ಗ್ರಾಮ ಪಂಚಾಯತಿ ಕಟ್ಟಡ/ ಉಪಕೇಂದ್ರ/ ಅಂಗನವಾಡಿ ಕೇಂದ್ರ/ ಶಾಲಾ ಕೊಠಡಿ/ ಸಮುದಾಯ ಭವನ ಇವುಗಳಲ್ಲಿ ಅನುಕೂಲವಿರುವ ಯಾವುದಾದರೂ ಒಂದು ಸ್ಥಳದಲ್ಲಿ ನಿಯಮಿತವಾಗಿ ಸಭೆ ಸೇರಬೇಕು. ತುರ್ತು ಸಂದರ್ಭದಲ್ಲಿ ವಿಶೇಷ ಸಭೆ ಕರೆಯಬಹುದಾಗಿರುತ್ತದೆ.

**ಅ.4.2**. ಸಾಮಾನ್ಯ ಸಭೆಯ ಬಗ್ಗೆ 3 ಪೂರ್ಣ ದಿವಸಗಳ ಮುಂಚೆ ಕಾರ್ಯಸೂಚಿಯೊಡನೆ ನೋಟೀಸನ್ನು ಸಮಿತಿಯ ಕಾರ್ಯದರ್ಶಿ ನೀಡತಕ್ಕದ್ದು. ವಿಶೇಷ ಸಭೆಯನ್ನು ನೋಟೀಸ್ ನೀಡಿ 24 ಘಂಟೆಯೊಳಗಾಗಿ ಕರೆಯಬಹುದಾಗಿದೆ.

**ಅ.4.3**. ಸಭೆ ನಡೆಸಲು ಸದಸ್ಯರ ಕೋರಂ ಒಟ್ಟು ಸದಸ್ಯರ ಸಂಖ್ಯೆಯ 1/3 ರಷ್ಟು ಆಗಿರತಕ್ಕದ್ದು.

ಹಾಗೂ ಭಾಗವಹಿಸಿದ ಸದಸ್ಯರಲ್ಲಿ ಕನಿಷ್ಟ ಪಕ್ಷ 1/3 ರಷ್ಟು ಮಹಿಳಾ ಸದಸ್ಯರು ಹಾಜರಿರತಕ್ಕದ್ದು.

**ಅ.4.4**. ಸಭೆ ಪ್ರಾರಂಭಿಸಲು ಕೋರಂ ಇರದಿದ್ದರೆ ಸಭೆಯ ಅಧ್ಯಕ್ಷರು 30 ನಿಮಿಷಗಳವರೆಗೆ ಕಾಯತಕ್ಕದ್ದು. ನಂತರದಲ್ಲೂ ಕೋರಂ ಇಲ್ಲದಿದ್ದರೆ ಸಭೆಯನ್ನು ಆ ತಿಂಗಳಲ್ಲೇ ಮುಂದಿನ ಅನುಕೂಲಕರ ದಿನಾಂಕಕ್ಕೆ ಮುಂದೂಡಿ ಹೊಸ ನೋಟೀಸ್ ನೀಡತಕ್ಕದ್ದು.

**ಅ.4.5**. ಸಭೆಯ ದಿನದಂದು ಯಾವುದೇ ಕಾರಣಕ್ಕಾಗಿ ಅಧ್ಯಕ್ಷರು ಗೈರು ಹಾಜರಾಗಿದ್ದರೆ, ಕೋರಂ ಇದ್ದರೆ, ಸಭೆಯಲ್ಲಿರುವ ಸರ್ವಸಮ್ಮತವಾದ ಸದಸ್ಯರಲ್ಲೊಬ್ಬರು ಅಧ್ಯಕ್ಷತೆ ವಹಿಸಿ ಸಭೆ ನಡೆಸ ಬಹುದಾಗಿರುತ್ತದೆ.

**ಅ.4.6**. ಸಭೆಯ ನಡವಳಿಕೆ ಮತ್ತು ನಿರ್ಣಯಗಳನ್ನು ಅಧಿಕೃತ ಪುಸ್ತಕದಲ್ಲಿ ದಾಖಲಿಸಿ ಸದಸ್ಯರ ಸಹಿ ಪಡೆದು ಪ್ರತಿಗಳನ್ನು ಪ್ರಾಥಮಿಕ ಆರೋಗ್ಯ ಕೇಂದ್ರ, ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಗೆ ಸಲ್ಲಿಸುವ ಹಾಗೂ ದಾಖಲೆಗಳನ್ನು ಸುಸ್ಥಿತಿಯಲ್ಲಿಡುವ ಜವಾಬ್ದಾರಿ ಕಾರ್ಯದರ್ಶಿಯದ್ದಾಗಿರುತ್ತದೆ.

**ಅ.4.7**. ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ ಸಮಿತಿಯ ಬ್ಯಾಂಕ್ ಖಾತೆಯು ಸಮಿತಿಯ ಅಧ್ಯಕ್ಷರು ಮತ್ತು ಕಾರ್ಯದರ್ಶಿಯ ಜಂಟಿ ಖಾತೆಯಲ್ಲಿ ಇರಬೇಕು.

**ಅ.4.8**. ಪ್ರತಿ 3 ತಿಂಗಳಿಗೊಮ್ಮೆ ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ/ ಗ್ರಾಮ ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಯು ಗ್ರಾಮ ಪಂಚಾಯತಿಯ ಸೌಕರ್ಯ ಸ್ಥಾಯಿ ಸಮಿತಿಗೆ ಹಣಕಾಸಿನ ಹಾಗೂ ಕಾರ್ಯಕ್ರಮದ ವರದಿ ಸಲ್ಲಿಸಬೇಕು.

**ಅ.4.9**. ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ/ ಗ್ರಾಮ ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಯು ಗ್ರಾಮ ಪಂಚಾಯ್ತಿಯ ಗ್ರಾಮ ಸಭೆಗೆ ಉತ್ತರದಾಯಿಯಾಗಿರಬೇಕು.

**ಅ.4.10**. ಕರ್ನಾಟಕ ಪಂಚಾಯತ್ ರಾಜ್ ಕಾಯಿದೆ 1993 ರ ಪ್ರಕರಣ 61–ಇ ಪ್ರಕಾರ ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ/ ಗ್ರಾಮ ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಯು, ಗ್ರಾಮ ಪಂಚಾಯತಿ "ಸೌಕರ್ಯ ಸಮಿತಿ"ಯ "ಉಪಸಮಿತಿ" ಸ್ಥಾನಮಾನ ಹೊಂದಿರುತ್ತದೆ.

**ಆ. ಪ್ರಾಥಮಿಕ ಆರೋಗ್ಯ ಕೇಂದ್ರ, ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿ :**

**ಆ.1. ವ್ಯಾಪ್ತಿ:**

ಪ್ರಾಥಮಿಕ ಆರೋಗ್ಯ ಕೇಂದ್ರದ ಭೌಗೋಳಿಕ ಪ್ರದೇಶಕ್ಕೆ ಸೀಮಿತವಾಗಿರುವಂತೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ, ರೋಗ ನಿಯಂತ್ರಣ, ತಾಯಿ ಮಕ್ಕಳ ಆರೋಗ್ಯ, ಸಮಗ್ರ ತಾಯಿ ಭಾಗ್ಯ ಮುಂತಾದ ಸೇವೆಗಳ/ಯೋಜನೆಗಳ ಅನುಷ್ಠಾನಕ್ಕೆ ಹಾಗೂ ಪ್ರಾಥಮಿಕ ಆರೋಗ್ಯ ಕೇಂದ್ರದಿಂದ ದೊರೆಯುವ ಗುಣಮಟ್ಟದ ಸಾಂಸ್ಥಿಕ ವೈದ್ಯಕೀಯ ಸೇವೆಗಳ ನಿರ್ವಹಣೆ ಕುರಿತಂತೆ ಘಟಿಸಲಾಗಿರುವ "ಆರೋಗ್ಯ ರಕ್ಷಾ ಉಪ ಸಮಿತಿ"ಯನ್ನೊಳಗೊಂಡಂತೆ ಒಂದು ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿ ರಚಿಸತಕ್ಕದ್ದು.

**ಆ.2. ರಚನೆ:**

ರಚಿಸಲಾಗುವ ಪ್ರಾಥಮಿಕ ಆರೋಗ್ಯ ಕೇಂದ್ರ ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಯು ಕೆಳಕಂಡಂತೆ ಸದಸ್ಯರನ್ನು ಹೊಂದಿರತಕ್ಕದ್ದು.

| | | | |
|---|---|---|---|
| 1 | ಪ್ರಾಥಮಿಕ ಆರೋಗ್ಯ ಕೇಂದ್ರ, ಕೇಂದ್ರ ಸ್ಥಾನದ ಗ್ರಾಮ ಪಂಚಾಯತಿ ಅಧ್ಯಕ್ಷರು | ಸಂಚಿತ ಗಣನೆ–1 | ಅಧ್ಯಕ್ಷರು |
| 2 | ಪ್ರಾಥಮಿಕ ಆರೋಗ್ಯ ಕೇಂದ್ರದ ವ್ಯಾಪ್ತಿಯಲ್ಲಿರುವ ಎಲ್ಲಾ ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ ಸಮಿತಿಗಳಿಂದ, ಸಮಿತಿಗೊಬ್ಬರಂತೆ ನಾಮ ನಿರ್ದೇಶಿತರಾದ ಸದಸ್ಯರು. | 2 ರಿಂದ 17(ಅಥವಾ ವಾಸ್ತವಿಕ ಸಂಖ್ಯೆ) | ಸದಸ್ಯರು |
| 3 | ಪ್ರಾಥಮಿಕ ಆರೋಗ್ಯ ಕೇಂದ್ರ ಕ್ಷೇತ್ರದ ಎಲ್ಲಾ ಗ್ರಾಮ ಪಂಚಾಯತಿ ಅಧ್ಯಕ್ಷರು, | 18 ರಿಂದ 22 (ಅಥವಾ ವಾಸ್ತವಿಕ ಸಂಖ್ಯೆ) | ಸದಸ್ಯರು |
| 4 | ಪ್ರಾಥಮಿಕ ಆರೋಗ್ಯ ಕೇಂದ್ರ ಇರುವ ಗ್ರಾಮದ, ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ ಸಮಿತಿಯಿಂದ ನೇಮಕಗೊಂಡ ಪದನಿಮಿತ್ತ ಸದಸ್ಯರು | | |
| | ➢ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಮಹಿಳಾ ಸದಸ್ಯ ಪ್ರತಿನಿಧಿ | 23 | ಸದಸ್ಯರು |
| | ➢ ಹಿಂದುಳಿದ/ಅಲ್ಪಸಂಖ್ಯಾತ ಮಹಿಳಾ ಸದಸ್ಯ ಪ್ರತಿನಿಧಿ | 24 | ಸದಸ್ಯರು |
| | ➢ ಸಾಮಾನ್ಯ ವರ್ಗದ ಮಹಿಳಾ ಸದಸ್ಯ ಪ್ರತಿನಿಧಿ | 25 | ಸದಸ್ಯರು |
| 5 | ಅಂಗನವಾಡಿ ಮೇಲ್ವಿಚಾರಕಿ | 26 | ಸದಸ್ಯರು |
| 6 | ಪ್ರಾಥಮಿಕ ಆರೋಗ್ಯ ಕೇಂದ್ರ ಇರುವ ಗ್ರಾಮದ, ಪ್ರಾಥಮಿಕ / ಸೆಕೆಂಡರಿ ಶಾಲೆಯ ಮುಖ್ಯೋಪಾಧ್ಯಾಯರು | 27 | ಸದಸ್ಯರು |
| 7 | ಪ್ರಾಥಮಿಕ ಆರೋಗ್ಯ ಕೇಂದ್ರದ, ಕೇಂದ್ರ ಸ್ಥಾನದ ಹಿರಿಯ ಮಹಿಳಾ ಆರೋಗ್ಯ ಸಹಾಯಕಿ. | 28 | ಸದಸ್ಯರು |
| 8 | ಪ್ರಾಥಮಿಕ ಆರೋಗ್ಯ ಕೇಂದ್ರದ, ಆಡಳಿತ ವೈದ್ಯಾಧಿಕಾರಿ | 29 | ಸದಸ್ಯ ಕಾರ್ಯದರ್ಶಿ |
| 9 | ನೋಡಲ್ ಎನ್.ಜಿ.ಓ. ಪ್ರತಿನಿಧಿ | 30 | ಸಹಾಯಕ ಸದಸ್ಯ ಕಾರ್ಯದರ್ಶಿ |

**ಆ.3. ಪ್ರಾಥಮಿಕ ಆರೋಗ್ಯ ಕೇಂದ್ರ ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಯ ಜವಾಬ್ದಾರಿಗಳು :**

**ಆ.3.1.** ಭಾರತ ಸರ್ಕಾರದ ಮಾರ್ಗಸೂಚಿಯನ್ವಯ ಸಮುದಾಯ ಮಾನಿಟರಿಂಗ್ ಕಾರ್ಯಗಳನ್ನು ಅರ್ಥಪೂರ್ಣವಾಗಿ ಪ್ರಾಥಮಿಕ ಆರೋಗ್ಯ ಕೇಂದ್ರದ ವ್ಯಾಪ್ತಿಯಲ್ಲಿ ಅನುಷ್ಠಾನಗೊಳಿಸುವುದು.

**ಆ.3.2.** 6 ತಿಂಗಳಿಗೊಂದು ಬಾರಿ ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ಆರೋಗ್ಯ ಜನಸಂವಾದ ಕಾರ್ಯಕ್ರಮವನ್ನು ಹಮ್ಮಿಕೊಳ್ಳತಕ್ಕದ್ದು. ಮತ್ತು ಇದರಲ್ಲಿ ಆರೋಗ್ಯ ಇಲಾಖೆಯ ವಿವಿಧ ಆರೋಗ್ಯ ಮತ್ತು ವೈದ್ಯಕೀಯ ಸೇವೆಗಳು ಮತ್ತು ಕೊರತೆಗಳ ಬಗ್ಗೆ ಸಾರ್ವಜನಿಕರಿಂದ ಅಭಿಪ್ರಾಯಪಡೆದು, ಸೇವೆಗಳನ್ನು ಉತ್ತಮಪಡಿಸುವಲ್ಲಿ ಸ್ಥಳೀಯವಾಗಿ ಕಾರ್ಯೋನ್ಮುಖರಾಗುವುದು.

**ಆ.3.3.** ಪ್ರಾಥಮಿಕ ಆರೋಗ್ಯ ಕೇಂದ್ರದ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಗ್ರಾಮ ಆರೋಗ್ಯ ನೈರ್ಮಲ್ಯ ಸಮಿತಿಯ ಯೋಜನೆಗಳನ್ನು ಕ್ರೋಡೀಕರಿಸಿ, ಪರಾಮರ್ಶಿಸಿ ಪ್ರಾಥಮಿಕ ಆರೋಗ್ಯ ಕೇಂದ್ರದ ವಾರ್ಷಿಕ ಆರೋಗ್ಯ ಯೋಜನೆ ತಯಾರಿಸುವುದು.

**ಆ.3.4.** ಆರೋಗ್ಯ ಕೇಂದ್ರದಲ್ಲಿ ದೊರೆಯುವ ಸವಲತ್ತುಗಳು, ಸೇವಾ ವಿವರಗಳು ಮತ್ತು ಸೇವಾ ವೇಳಾಪಟ್ಟಿ ಹಾಗೂ ಉಚಿತ ಸೇವೆಗಳ ಬಗ್ಗೆ ಜನರಿಗೆ ಮಾಹಿತಿ ನೀಡುವ ನಾಗರೀಕ ಸನ್ನದುಗಳ ಫಲಕ ಹಾಕಿಸುವುದು. ನಾಗರಿಕರಿಗೆ ಆರೋಗ್ಯ ಸೇವೆ ಉತ್ತಮ ಪಡಿಸಲು ಅನುಕೂಲವಾಗುವಂತೆ ಸಲಹಾ ಪೆಟ್ಟಿಗೆ ಇರಿಸುವುದು.

**ಆ.3.5.** ಆರೋಗ್ಯ ಕೇಂದ್ರದಲ್ಲಿ ಮೂಲಭೂತ ಸೌಕರ್ಯ, ಯಂತ್ರೋಪಕರಣ, ಔಷಧಿ, ನೀರಿನ ಸಂಪರ್ಕ ಇತ್ಯಾದಿಗಳನ್ನು ಸಂಬಂಧಪಟ್ಟ ಇಲಾಖೆಗಳನ್ನು ಸಂಪರ್ಕಿಸಿ ಉತ್ತಮಗೊಳಿಸುವುದು.

**ಆ.3.6.** ಸ್ಥಳೀಯ ಸಮುದಾಯ ಸಂಸ್ಥೆಗಳು ಹಾಗೂ ಸ್ವಯಂ ಸೇವಾಸಂಸ್ಥೆಗಳೊಂದಿಗೆ ಸಮನ್ವಯಿಸಿ ಆರೋಗ್ಯ ಪರಿಸ್ಥಿತಿಯನ್ನು ಸುಧಾರಿಸುವುದು.

**ಆ.3.7.** ಪ್ರಾಥಮಿಕ ಆರೋಗ್ಯ ಕೇಂದ್ರದ ವ್ಯಾಪ್ತಿಯ ಉಪಕೇಂದ್ರಗಳು ಉತ್ತಮ ಸೇವೆ ಕೊಡಲು ಅಗತ್ಯವಾದ ನಿರ್ಧಾರಗಳ್ನನು ಮಾಡಿ ಅದರಂತೆ ಕ್ರಮ ಕೈಗೊಳ್ಳುವುದು.

**ಆ.3.8.** ಸರ್ಕಾರಿ ಆರೋಗ್ಯ / ವೈದ್ಯಕೀಯ ಸೌಲಭ್ಯಗಳ ಗುಣಮಟ್ಟದ ಬಗ್ಗೆ ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸುವುದು ಮತ್ತು ಸೇವಾಬಳಕೆ ಹೆಚ್ಚಾಗುವಂತೆ ಅಗತ್ಯ ಜನಜಾಗೃತಿ ಅಭಿಯಾನ ಹಮ್ಮಿಕೊಳ್ಳುವುದು.

**ಆ.3.9.** ಆರೋಗ್ಯ /ವೈದ್ಯಕೀಯ ಸೇವೆ ನಿರಾಕರಣೆ ಸಂದರ್ಭದಲ್ಲಿ ಸೂಕ್ತ ಪರಿಹಾರ ಕ್ರಮ ಕೈಗೊಂಡು ಸೇವಾ ವ್ಯವಸ್ಥೆಯನ್ನು ಉತ್ತಮ ಪಡಿಸುವುದು.

**ಆ.3.10.** ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ/ಗ್ರಾಮ ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಯ ಕಾರ್ಯ ಚಟುವಟಿಕೆಗಳನ್ನು ಪರಿಶೀಲಿಸುವುದು.

**ಆ.3.11.** ಪ್ರಾ.ಆ.ಕೇಂದ್ರ ವ್ಯಾಪ್ತಿಯಲ್ಲಿ ವರದಿಯಾಗುವ ಪ್ರತಿಯೊಂದು ತಾಯಿ ಮತ್ತು ಶಿಶು ಮರಣವನ್ನು ದಾಖಲಿಸುವುದು ಹಾಗೂ ಇದಕ್ಕೆ ಕಾರಣವಾದ ಸೌಲಭ್ಯಗಳ ಕೊರತೆಯ ಬಗ್ಗೆ ಪರಿಶೀಲಿಸಿ, ಅಗತ್ಯ ನಿವಾರಣಾ ಕ್ರಮಗಳನ್ನು ಕೈಗೊಂಡು ಇನ್ನು ಮುಂದೆ ತಾಯಿ ಮತ್ತು ಶಿಶು ಮರಣ ಸಂಭವಿಸದಂತೆ ತಡೆಗಟ್ಟುವುದು.

**ಆ.3.12.** ಹೆಣ್ಣು ಭ್ರೂಣಹತ್ಯೆಗೆ ಕಾರಣವಾಗುವ ಸಾಮಾಜಿಕ ಆಯಾಮಗಳ ಬಗ್ಗೆ ಜನಜಾಗೃತಿ ಅಭಿಯಾನವನ್ನು ಎಲ್ಲಾ ಗ್ರಾಮಗಳಲ್ಲೂ ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ ಸಮಿತಿಯ ಸಹಯೋಗದೊಂದಿಗೆ ಹಮ್ಮಿಕೊಳ್ಳುವುದು ಹಾಗೂ ಇಂತಹ ಪ್ರಕರಣಗಳ ನಿಖರ ಮಾಹಿತಿಯನ್ನು ಜಿಲ್ಲಾ ಸಕ್ಷಮ ಪ್ರಾಧಿಕಾರ/ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳ ಗಮನಕ್ಕೆ ತರತಕ್ಕದ್ದು ಮತ್ತು ನಿರ್ಧಿಷ್ಟ ಕ್ರಮಕ್ಕಾಗಿ ಒತ್ತಾಯಿಸುವುದು.

**ಆ.3.13.** ವಿವಿಧ ಜನಪರ ಕಾರ್ಯಕ್ರಮಗಳಾದ ಪ್ರಸೂತಿ ಆರೈಕೆ, ಜನನಿ ಸುರಕ್ಷಾ ಯೋಜನೆ, ಮಡಿಲು ಮತ್ತು ತಾಯಿ ಭಾಗ್ಯದ ಸವಲತ್ತುಗಳನ್ನು ಪಡೆದ ಫಲಾನುಭವಿಗಳ ಸತ್ಯಾಪನೆ ಮಾಡುವುದು.

**ಆ.4.** ಸಮಿತಿಯ ಸಭೆ:

**ಆ.4.1.** 3 ತಿಂಗಳಿಗೊಮ್ಮೆ ತಿಂಗಳ ಎರಡನೇ ಸೋಮವಾರದ ಅಪರಾಹ್ನದಂದು ಪ್ರಾಥಮಿಕ ಆರೋಗ್ಯ ಕೇಂದ್ರದ ಮೀಟಿಂಗ್‌ಹಾಲ್‌ನಲ್ಲಿ ಸಭೆಯನ್ನು ನಡೆಸತಕ್ಕದ್ದು.

**ಆ.4.2.** 3 ದಿವಸ ಮುಂಚಿತವಾಗಿ ಸಭೆಯಲ್ಲಿ ಚರ್ಚಿಸಬೇಕಿರುವ ವಿಷಯಗಳನ್ನೊಳಗೊಂಡ ಕಾರ್ಯಸೂಚಿಯೊಡನೆ ತಿಳುವಳಿಕೆ ಪತ್ರದ ಮುಖಾಂತರ ಸದಸ್ಯ ಕಾರ್ಯದರ್ಶಿಗಳು ಅಥವಾ ಅವರಿಂದ ಅನುಮತಿಸಲ್ಪಟ್ಟ ಸಹಾಯಕ ಸದಸ್ಯ ಕಾರ್ಯದರ್ಶಿಯವರು ಸಭೆ ಕರೆಯತಕ್ಕದ್ದು. ವಿಶೇಷ ಸಭೆಯನ್ನು ನೋಟೀಸ್ ನೀಡಿ 24 ಘಂಟೆಯೊಳಗಾಗಿ ಕರೆಯಬಹುದಾಗಿದೆ.

**ಆ.4.3.** ಸಭೆ ನಡೆಸಲು ಸದಸ್ಯರ ಕೋರಂ ಒಟ್ಟು ಸದಸ್ಯರ ಸಂಖ್ಯೆಯ 1/3 ರಷ್ಟು ಆಗಿರತಕ್ಕದ್ದು.
ಹಾಗೂ ಭಾಗವಹಿಸಿದ ಸದಸ್ಯರಲ್ಲಿ ಕನಿಷ್ಟ ಪಕ್ಷ 1/3 ರಷ್ಟು ಮಹಿಳಾ ಸದಸ್ಯರು ಹಾಜರಿರತಕ್ಕದ್ದು.

**ಆ.4.4**. ಸಭೆ ಪ್ರಾರಂಭಿಸಲು ಕೋರಂ ಇರದಿದ್ದರೆ ಸಭೆಯ ಅಧ್ಯಕ್ಷರು 30 ನಿಮಿಷಗಳವರೆಗೆ ಕಾಯತಕ್ಕದ್ದು. ನಂತರದಲ್ಲೂ ಕೋರಂ ಇಲ್ಲದಿದ್ದರೆ ಸಭೆಯನ್ನು ಆ ತಿಂಗಳಲ್ಲೇ ಮುಂದಿನ ಅನುಕೂಲಕರ ದಿನಾಂಕಕ್ಕೆ ಮುಂದೂಡಿ ಹೊಸ ನೋಟೀಸ್ ನೀಡತಕ್ಕದ್ದು.

**ಆ.4.5**. ಸಭೆಯ ದಿನದಂದು ಯಾವುದೇ ಕಾರಣಕ್ಕಾಗಿ ಅಧ್ಯಕ್ಷರು ಗೈರು ಹಾಜರಾಗಿದ್ದರೆ, ಕೋರಂ ಇದ್ದರೆ, ಸಭೆಯಲ್ಲಿರುವ ಸರ್ವಸಮ್ಮತವಾದ ಸದಸ್ಯರಲ್ಲೊಬ್ಬರು ಅಧ್ಯಕ್ಷತೆ ವಹಿಸಿ ಸಭೆ ನಡೆಸ ಬಹುದಾಗಿರುತ್ತದೆ.

**ಆ.4.6**. ಸಭೆಯ ನಡವಳಿಕೆ ಮತ್ತು ನಿರ್ಣಯಗಳನ್ನು ಅಧಿಕೃತ ಪುಸ್ತಕದಲ್ಲಿ ದಾಖಲಿಸಿ ಸದಸ್ಯರ ಸಹಿ ಪಡೆದು ಪ್ರತಿಗಳನ್ನು ತಾಲ್ಲೂಕು ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಗೆ ಸಲ್ಲಿಸುವ ಹಾಗೂ ದಾಖಲೆಗಳನ್ನು ಸುಸ್ಥಿತಿಯಲ್ಲಿಡುವ ಜವಾಬ್ದಾರಿ ಕಾರ್ಯದರ್ಶಿಯದ್ದಾಗಿರುತ್ತದೆ. ಇದಕ್ಕಾಗಿ ಸಹಕಾರ್ಯದರ್ಶಿಯವರು, ಕಾರ್ಯದರ್ಶಿಗೆ ಸಹಕರಿಸತಕ್ಕದ್ದು.

**ಆ.5. ಖರ್ಚು ವೆಚ್ಚ:**

ಸಮಿತಿಯ ಸದಸ್ಯರ ಬಸ್ ಪ್ರಯಾಣದ ಕನಿಷ್ಟ ವೆಚ್ಚ ಮತ್ತು ಸಭೆಯ ದಿನದಂದು ಅವಶ್ಯವಿರುವ ಕನಿಷ್ಟ ಸಾದಿಲ್ವಾರು ವೆಚ್ಚವನ್ನು ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ನೀಡಲಾಗಿರುವ ಮುಕ್ತನಿಧಿಯಿಂದ ಭರಿಸತಕ್ಕದ್ದು.

**ಆ.6. ಪ್ರಾಥಮಿಕ ಆರೋಗ್ಯ ಕೇಂದ್ರದ ಆರೋಗ್ಯ ರಕ್ಷಾ ಸಮಿತಿ:**

**ಆ. 6.1**. ಪ್ರಾಥಮಿಕ ಆರೋಗ್ಯ ಕೇಂದ್ರದ ಆರೋಗ್ಯ ರಕ್ಷಾ ಸಮಿತಿಯು, ಪ್ರಾಥಮಿಕ ಆರೋಗ್ಯ ಕೇಂದ್ರದ ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಯ ಉಪ ಸಮಿತಿಯಾಗಿ ಇನ್ನು ಮುಂದೆ ಕೆಲಸ ನಿರ್ವಹಿಸತಕ್ಕದ್ದು.

**ಆ. 6.2. ರಚನೆ:**

ಪ್ರಾಥಮಿಕ ಆರೋಗ್ಯ ಕೇಂದ್ರದ "ಆರೋಗ್ಯ ರಕ್ಷಾ ಸಮಿತಿ" ಕೆಳ ನಮೂದಿಸಿರುವ ಸದಸ್ಯರುಗಳನ್ನು ಹೊಂದಿರುವಂತೆ ಪುನರ್ರಚಿಸತಕ್ಕದ್ದು.

| | | |
|---|---|---|
| 1 | ಪ್ರಾಥಮಿಕ ಆರೋಗ್ಯ ಕೇಂದ್ರ, ಕೇಂದ್ರ ಸ್ಥಾನದ ಗ್ರಾಮ ಪಂಚಾಯತಿ ಅಧ್ಯಕ್ಷರು | ಅಧ್ಯಕ್ಷರು |
| 2 | ಸ್ಥಳೀಯ ಗ್ರಾಮ ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಯಿಂದ ಆಯ್ದ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಮಹಿಳಾ ಸದಸ್ಯೆ | ಸದಸ್ಯರು |
| 3 | ಪಕ್ಕದ ಇನ್ನೊಂದು ಗ್ರಾಮ ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಯಿಂದ ಆಯ್ದ ಹಿಂದುಳಿದ / ಅಲ್ಪಸಂಖ್ಯಾತ ಮಹಿಳಾ ಸದಸ್ಯೆ | ಸದಸ್ಯರು |
| 4 | ಸ್ಥಳೀಯ ಗ್ರಾಮದ ಅಥವಾ ಪ್ರಾ.ಆ.ಕೇಂದ್ರದ ವ್ಯಾಪ್ತಿಯಲ್ಲಿರುವ ಇತರೇ ಗ್ರಾಮದ ಮತ್ತು ಯಾವುದೇ ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಯಲ್ಲಿ ಸದಸ್ಯರಲ್ಲದ, ಆದರೆ ತಾಯಿ ಮಕ್ಕಳ ಆರೋಗ್ಯದ ಬಗ್ಗೆ ಕಾಳಜಿ ಇರುವ ಪ್ರಗತಿಪರ ದೃಷ್ಟಿಕೋನವಿರುವ ಪುರುಷ ಅಥವಾ ಮಹಿಳೆ | ಸದಸ್ಯರು |
| 5 | ಸ್ಥಳೀಯ ಎನ್.ಜಿ.ಓ. ಮಹಿಳಾ ಪ್ರತಿನಿಧಿ | ಸದಸ್ಯರು |
| 6 | ಅಂಗನವಾಡಿ ಮೇಲ್ವಿಚಾರಕಿ | ಸದಸ್ಯರು |
| 7 | ಪ್ರಾಥಮಿಕ ಆರೋಗ್ಯ ಕೇಂದ್ರ ಇರುವ ಗ್ರಾಮದ, ಪ್ರಾಥಮಿಕ/ ಸೆಕೆಂಡರಿ ಶಾಲೆಯ ಮುಖ್ಯೋಪಾಧ್ಯಾಯರು | ಸದಸ್ಯರು |
| 8 | ಪ್ರಾಥಮಿಕ ಆರೋಗ್ಯ ಕೇಂದ್ರ, ಕೇಂದ್ರ ಸ್ಥಾನದ ಹಿರಿಯ ಮಹಿಳಾ ಆರೋಗ್ಯ ಸಹಾಯಕಿ. | ಸದಸ್ಯರು |
| 9 | ಪ್ರಾಥಮಿಕ ಆರೋಗ್ಯ ಕೇಂದ್ರದ, ಆಡಳಿತ ವೈದ್ಯಾಧಿಕಾರಿ | ಸದಸ್ಯ ಕಾರ್ಯದರ್ಶಿ |

**ಆ.6.3. ಆರೋಗ್ಯ ರಕ್ಷಾ ಸಮಿತಿಯ ಜವಾಬ್ದಾರಿಗಳು:**

**ಆ.6.3.1**. ನಾಗರೀಕ ಆರೋಗ್ಯ ಹಕ್ಕುಗಳ ಸನ್ನದನ್ನು ಸಿದ್ದಪಡಿಸಿ ಆರೋಗ್ಯ ಕೇಂದ್ರದಲ್ಲಿ ಫಲಕದ ಮೂಲಕ ಪ್ರದರ್ಶಿಸಬೇಕು.

**ಆ.6.3.2**. ಆರೋಗ್ಯ ಕೇಂದ್ರದ ಸರ್ವತೋಮುಖ ಅಭಿವೃದ್ದಿಗೆ ವಾರ್ಷಿಕ ನೀಲ ನಕ್ಷೆಯನ್ನು ಸಿದ್ದಪಡಿಸಬೇಕು.

**ಆ.6.3.3**. ಆರೋಗ್ಯ ಕೇಂದ್ರದ ಒಳ ಮತ್ತು ಹೊರ ಆವರಣವನ್ನು ಶುಚಿಯಾಗಿಡುವ ಎಲ್ಲಾ ಕೆಲಸಗಳನ್ನು ಆದ್ಯತೆಯ ಮೇಲೆ ಕೈಗೊಳ್ಳಬೇಕು.

**ಆ.6.3.4**. ಆರೋಗ್ಯ ಕೇಂದ್ರದ ಸುತ್ತಲೂ ರಕ್ಷಣಾ ಗೋಡೆಯನ್ನು ನಿರ್ಮಿಸುವಲ್ಲಿ ಅಗತ್ಯ ಸಂಪನ್ಮೂಲ ಕ್ರೋಡೀಕರಿಸಿ ನಿರ್ಮಾಣ ಕಾರ್ಯ ಕೈಗೊಳ್ಳಬೇಕು.

**ಆ.6.3.5**. ಆರೋಗ್ಯ ಕೇಂದ್ರದ ಆಸ್ತಿಯನ್ನು ಮತ್ತು ದಾಖಲೆಗಳನ್ನು ಸಂರಕ್ಷಿಸಲು ಕಾರ್ಯ ಸನ್ನದ ರಾಗಬೇಕು.

**ಆ.6.3.6**. ಆರೋಗ್ಯ ಕೇಂದ್ರದ ಆವರಣದಲ್ಲಿ ಸಾಮಾಜಿಕ ಅರಣ್ಯ ಕಾರ್ಯಕ್ರಮದಡಿಯಲ್ಲಿ ಸಸಿಗಳನ್ನು ನೆಟ್ಟು ಬೆಳೆಸಬೇಕು ಇದಕ್ಕಾಗಿ ಅರಣ್ಯ ಇಲಾಖೆಯ ಸ್ಥಳೀಯ ಅಧಿಕಾರಿಗಳ ಸಹಾಯವನ್ನು ಪಡೆಯಬೇಕು.

**ಆ.6.3.7**. ಆರೋಗ್ಯ ಕೇಂದ್ರಕ್ಕೆ ಆಗಮಿಸುವ ರೋಗಿಗಳು ಮತ್ತವರ ಸಂಬಂಧಿಕರಿಗೆ ಅತ್ಯಾವಶ್ಯಕವಾದ, ಕುಡಿಯುವ ನೀರು, ಶೌಚಾಲಯ, ಮತ್ತು ಕುಳಿತು ವಿಶ್ರಮಿಸಿ ಕೊಳ್ಳಲು ಅಗತ್ಯ ವ್ಯವಸ್ಥೆಗಳನ್ನು ಕಡ್ಡಾಯವಾಗಿ ಮಾಡಬೇಕು.

**ಆ.6.3.8**. ಆರೋಗ್ಯ ಕೇಂದ್ರವನ್ನು ಸುಸ್ಥಿತಿಯಲ್ಲಿಡಲು ಅಗತ್ಯ ದುರಸ್ತಿ ಕೆಲಸಗಳನ್ನು ಸ್ಥಳೀಯ ಇಂಜಿನಿಯರ್ ರವರ ತಾಂತ್ರಿಕ ಸಲಹೆ ಪಡೆದು, ಕೈಗೊಳ್ಳಬೇಕು.

**ಆ.6.3.9**. ಆರೋಗ್ಯ ಕೇಂದ್ರದ ಸುಧಾರಣೆ ಮತ್ತು ಮೂಲಭೂತ ಸೌಕರ್ಯಗಳ ನಿರ್ವಹಣೆಗಾಗಿ, ಯೋಜನೆ ಮತ್ತು ಕೆಲಸಕ್ಕಾಗಿ ವಾರ್ಷಿಕ ನಿರ್ವಹಣಾ ವೆಚ್ಚ ಮತ್ತು ಮುಕ್ತನಿಧಿಯನ್ನು ಕ್ರಮವರಿತು ಬಳಸಬೇಕು.

**ಆ.6.3.10**. ಖರ್ಚು ಮಾಡಲಾದ ಹಣಕ್ಕೆ ಸರಿಯಾದ ರಸೀದಿ ಮತ್ತು ಬಿಲ್‌ಗಳನ್ನು ಪಡೆದು ಕಾಲಕಾಲಕ್ಕೆ ಖರ್ಚಿನ ತಖ್ತೆಯನ್ನು ತಾಲ್ಲೂಕು ಮತ್ತು ಜಿಲ್ಲಾ ಆರೋಗ್ಯ ಸಂಘಕ್ಕೆ ಸಲ್ಲಿಸಬೇಕು.

**ಆ.6.3.11**. ಆರೋಗ್ಯ ಕೇಂದ್ರದ ಅಭಿವೃದ್ಧಿಗೆ ಮತ್ತು ಸೌಲಭ್ಯ ಸುಧಾರಣೆಗೆ, ಕೇಂದ್ರದ ಎಲ್ಲಾ ಸಿಬ್ಬಂದಿಯವರು ಉತ್ತಮವಾಗಿ ಕೆಲಸ ನಿರ್ವಹಿಸುವಂತೆ ಅಗತ್ಯ ಕ್ರಮ ಕೈಗೊಳ್ಳಬೇಕು.

**ಆ.6.3.12**. ಪ್ರತೀ ತಿಂಗಳು ಆರೋಗ್ಯ ಕೇಂದ್ರದಲ್ಲಿ ಕ್ಯಾಟರಾಕ್ಟ್ ತಪಾಸಣಾ ಶಿಬಿರವನ್ನು ಏರ್ಪಡಿಸಬೇಕು. ಇದಕ್ಕಾಗಿ ನುರಿತ ತಜ್ಞರನ್ನು ಹತ್ತಿರದ ತಾಲ್ಲೂಕು ಆಸ್ಪತ್ರೆ ಅಥವಾ ಖಾಸಗೀ ಚಿಕಿತ್ಸಾಲಯಗಳಿಂದ ಬರಮಾಡಿಕೊಳ್ಳುವುದು.

**ಆ.6.3.13**. ಮುಕ್ತನಿಧಿ ಬಳಕೆ ಮಾರ್ಗದರ್ಶನದಂತೆ ನಿಗದಿ ಪಡಿಸದ ಉದ್ದೇಶಗಳಿಗಾಗಿ ಹಣ ಖರ್ಚು ಮಾಡದಂತೆ ಎಚ್ಚರವಹಿಸಬೇಕು.

**ಆ.6.3.14**. ಪ್ರತೀ ಪ್ರಾಥಮಿಕ ಆರೋಗ್ಯ ಕೇಂದ್ರದ ಆರೋಗ್ಯ ರಕ್ಷಾ ಸಮಿತಿಯು ಇತರ ಸಂಸ್ಥೆಗಳಿಂದ, ಪಂಚಾಯತಿಯಿಂದ, ದಾನಿಗಳಿಂದ ನಗದು ಅಥವಾ ವಸ್ತುಗಳ ರೂಪದಲ್ಲಿ ವಂತಿಗೆ/ದೇಣಿಗೆಯನ್ನು ಸಂಗ್ರಹಿಸಬಹುದು ಮತ್ತು ಅವುಗಳನ್ನು ಸಾರ್ವಜನಿಕ ಆರೋಗ್ಯ ಸುಧಾರಣೆಗಾಗಿ ಬಳಸತಕ್ಕದ್ದು.

**ಆ.6.4. ಸಮಿತಿ ಸಭೆ :** ಪ್ರತಿ ತಿಂಗಳು 4 ನೇ ಶನಿವಾರದ ಅಪರಾಹ್ನ ಕಡ್ಡಾಯವಾಗಿ ಸಭೆಯನ್ನು ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿ ನಡೆಸಬೇಕು.

**ಆ.6.4.1**. ಸಭೆಗಾಗಿ ಕಾರ್ಯಸೂಚಿಯನ್ನು ಮುಂಚಿತವಾಗಿ ಸಿದ್ದಪಡಿಸಿ, ಎಲ್ಲಾ ಸದಸ್ಯರಿಗೂ ಕನಿಷ್ಟ 3 ದಿವಸಗಳ ಮುಂಚಿತವಾಗಿ ಸಭಾ ತಿಳುವಳಿಕೆ ಪತ್ರದೊಡನೆ ನೀಡಿ ಸ್ವೀಕೃತಿಯನ್ನು ಪಡೆದಿರಬೇಕು.

**ಆ.6.4.2**. ಆರೋಗ್ಯ ಕೇಂದ್ರದ ಸಮಸ್ಯೆ, ಅಭಿವೃದ್ಧಿ, ಸ್ಥಳೀಯ ಆರೋಗ್ಯ ಸಮಸ್ಯೆಗಳು, ತಾಯಿ ಮಕ್ಕಳ ಆರೋಗ್ಯದ ಎಲ್ಲಾ ಆಯಾಮಗಳು, ಸಿಬ್ಬಂದಿ ಸಮಸ್ಯೆ, ಸಾರ್ವಜನಿಕರಿಂದ ನಿರೀಕ್ಷಿಸಿರುವ ಸಹಕಾರ, ಇತರೆ ಇಲಾಖೆಗಳ ಸಹಯೋಗ, ಮುಕ್ತನಿಧಿ ಮತ್ತು ನಿರ್ವಹಣಾ ನಿಧಿ ಬಳಕೆ ಹಾಗೂ ಮುಕ್ತನಿಧಿ ಖರ್ಚಿನಿಂದ ಕೈಗೊಂಡ ಕೆಲಸಗಳ ಪ್ರಗತಿ ಮುಂತಾದ ಅನೇಕ ವಿಚಾರಗಳಲ್ಲಿ ಪ್ರಸ್ತುತವಾಗಿರುವ ಯಾವುದಾದರೂ ವಿಷಯಗಳ ಬಗ್ಗೆ ಸಭೆ ಕರೆದು ಚರ್ಚಿಸಿತೀರ್ಮಾನ ಕೈಗೊಳ್ಳಬೇಕು.

**ಆ.6.4.3**. ಸಭಾ ನಡಾವಳಿಯನ್ನು ದಾಖಲಿಸಿ, ಪ್ರಾಥಮಿಕ ಆರೋಗ್ಯ ಕೇಂದ್ರದ ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿ, ತಾಲ್ಲೂಕು ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿ, ಜಿಲ್ಲಾ ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿ ಹಾಗೂ ಜಿಲ್ಲಾ ಆರೋಗ್ಯ ಸಂಘಕ್ಕೆ ವರದಿ ಮಾಡುವ ಜವಾಬ್ದಾರಿ ಕಾರ್ಯದರ್ಶಿಗಳದ್ದಾಗಿರುತ್ತದೆ.

**ಆ.6.5.ಖರ್ಚು ವೆಚ್ಚ :** ಸಭೆ ನಡೆಸಲು ಅವಶ್ಯವಿರುವ ಕನಿಷ್ಟ ಸಾರಿಗೆ ಮತ್ತು ಸಾದಿಲ್ವಾರು ವೆಚ್ಚವನ್ನು ಪ್ರಾಥಮಿಕ ಆರೋಗ್ಯ ಕೇಂದ್ರದ ಮುಕ್ತನಿಧಿಯಿಂದ ಭರಿಸತಕ್ಕದ್ದು ಮತ್ತು ಅಗತ್ಯ ದಾಖಲೆಗಳನ್ನು ಇಡತಕ್ಕದ್ದು.

**ಇ. ತಾಲ್ಲೂಕು ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿ:**

**ಇ.1.ವ್ಯಾಪ್ತಿ:** ತಾಲ್ಲೂಕಿನ ಭೌಗೋಳಿಕ ಪ್ರದೇಶಕ್ಕೆ ಸೀಮಿತವಾಗಿರುವಂತೆ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ, ರೋಗ ನಿಯಂತ್ರಣ, ತಾಯಿ ಮಕ್ಕಳ ಆರೋಗ್ಯ, ಸಮಗ್ರ ತಾಯಿ ಭಾಗ್ಯ ಮುಂತಾದ ಸೇವೆಗಳ/ಯೋಜನೆಗಳ ಅನುಷ್ಠಾನಕ್ಕೆ ಹಾಗೂ ತಾಲ್ಲೂಕು ಆಸ್ಪತ್ರೆ, ತಾಲ್ಲೂಕಿನಲ್ಲಿರುವ ಎಲ್ಲಾ ಸಮುದಾಯ ಆರೋಗ್ಯ ಕೇಂದ್ರಗಳ ಮತ್ತು ಎಲ್ಲಾ ಪ್ರಾಥಮಿಕ ಆರೋಗ್ಯ ಕೇಂದ್ರಗಳಿಂದ ದೊರೆಯುವ ಗುಣಮಟ್ಟದ ಸಾಂಸ್ಥಿಕ ವೈದ್ಯಕೀಯ ಸೇವೆಗಳ ಬಗ್ಗೆ ಚಿಂತನೆ, ಪರಾಮರ್ಶೆ, ವಿವಿಧ ಇಲಾಖೆಗಳ ಸಹಯೋಗ, ಯೋಜನೆ ಮತ್ತು ಅನುಷ್ಠಾನ ಕುರಿತಂತೆ ಒಂದು ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿ ರಚಿಸತಕ್ಕದ್ದು.

**ಇ.1.1.** ತಾಲ್ಲೂಕು ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಯು ತಾಲ್ಲೂಕು ಪಂಚಾಯತ್ ಸಮಿತಿಯ ಉಪಸಮಿತಿಯಾಗಿ ಕಾರ್ಯನಿರ್ವಹಿಸತಕ್ಕದ್ದು.

**ಇ.2.ರಚನೆ:** ರಚಿಸಲಾಗುವ ತಾಲ್ಲೂಕು ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಯು ಕೆಳಕಂಡಂತೆ ಸದಸ್ಯರನ್ನು ಹೊಂದಿರತಕ್ಕದ್ದು.

| | | | |
|---|---|---|---|
| 1 | ತಾಲ್ಲೂಕು ಪಂಚಾಯತಿಯ ಅಧ್ಯಕ್ಷರು | ಸಂಚಿತ ಗಣನೆ –1 | ಅಧ್ಯಕ್ಷರು |
| 2 | ಕಾರ್ಯ ನಿರ್ವಹಣಾ ಅಧಿಕಾರಿ ತಾಲ್ಲೂಕು ಪಂಚಾಯತಿ | 2 | ಸಹ ಅಧ್ಯಕ್ಷರು |
| 3 | ತಾಲ್ಲೂಕು ಪಂಚಾಯತಿಯ ಸಾಮಾನ್ಯ ಸ್ಥಾಯಿ ಸಮಿತಿ ಅಧ್ಯಕ್ಷರು | 3 | ಸದಸ್ಯರು |
| 4 | ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಮಹಿಳಾ ತಾಲ್ಲೂಕು ಪಂಚಾಯತಿ ಸದಸ್ಯೆ. | 4 | ಸದಸ್ಯರು |
| 5 | ಹಿಂದುಳಿದ/ಅಲ್ಪಸಂಖ್ಯಾತ ಮಹಿಳಾ ತಾಲ್ಲೂಕು ಪಂಚಾಯತಿ ಸದಸ್ಯೆ. | 5 | ಸದಸ್ಯರು |
| 6 | ಸಾಮಾನ್ಯ ವರ್ಗದ ಮಹಿಳಾ ಅಥವಾ ಪುರುಷ ತಾಲ್ಲೂಕು ಪಂಚಾಯತಿ ಸದಸ್ಯೆ/ಸದಸ್ಯ. | 6 | ಸದಸ್ಯರು |
| 7 | ಮಹಿಳಾ ಸ್ತ್ರೀ ಶಕ್ತಿ ಸ್ವ ಸಹಾಯ ಸಂಘ ತಾಲ್ಲೂಕು ಒಕ್ಕೂಟದ ಅಧ್ಯಕ್ಷರು | 7 | ಸದಸ್ಯರು |
| 8 | ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ/ತಾಲ್ಲೂಕು ವ್ಯವಸಾಯೋತ್ಪನ್ನ ಮಾರುಕಟ್ಟೆ ಸಮಿತಿಯ ಅಧ್ಯಕ್ಷರು | 8 | ಸದಸ್ಯರು |
| 9 | ತಾಲ್ಲೂಕಿನಲ್ಲಿರುವ ಪ್ರಮುಖ ಸಮಾಜ ಸೇವಕರು/ ದಾನಿಗಳು/ ಸಂಸ್ಥೆಗಳು. | 9 | ಸದಸ್ಯರು |
| 10 | ಭಾರತೀಯ ವೈದ್ಯಕೀಯ ಸಂಘ, ತಾಲ್ಲೂಕು ಘಟಕದ ಅಧ್ಯಕ್ಷರು | 10 | ಸದಸ್ಯರು |
| 11 | ರೆಡ್ ಕ್ರಾಸ್ ಸಂಸ್ಥೆಯ ತಾಲ್ಲೂಕು ಘಟಕದ ಅಧ್ಯಕ್ಷರು | 11 | ಸದಸ್ಯರು |
| 12 | ತಾಲ್ಲೂಕಿನಲ್ಲಿ ಆರೋಗ್ಯ ಸೇವಾ ಕ್ಷೇತ್ರದಲ್ಲಿ ಕಾರ್ಯ ನಿರತರಾಗಿರುವ ಸ್ವಯಂ ಸೇವಾಸಂಸ್ಥೆಯ ಅಧ್ಯಕ್ಷರು | 12 | ಸದಸ್ಯರು |
| 13 | ಎಲ್ಲಾ ಪ್ರಾಥಮಿಕ ಆರೋಗ್ಯ ಕೇಂದ್ರಗಳ ಆರೋಗ್ಯ ಮತ್ತು ಯೋಜನಾ ಸಮಿತಿಯ ಅಧ್ಯಕ್ಷರು | 13 ರಿಂದ 27 (ಅಥವಾ ವಾಸ್ತವಿಕ ಸಂಖ್ಯೆ) | ಸದಸ್ಯರುಗಳು |
| 14 | ಪದನಿಮಿತ್ತ ಸರ್ಕಾರಿ ಪ್ರತಿನಿಧಿಗಳು | | |
| | ➢ ತಾಲ್ಲೂಕು ಶಿಶು ಅಭಿವೃದ್ಧಿ ಯೋಜನಾಧಿಕಾರಿ | 28 | ಸದಸ್ಯರು |
| | ➢ ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿ | 29 | ಸದಸ್ಯರು |
| | ➢ ಪ್ರಾಂಶುಪಾಲರು, ಸರ್ಕಾರಿ ಪದವಿ ಪೂರ್ವ ಕಾಲೇಜು | 30 | ಸದಸ್ಯರು |
| | ➢ ಸಹಾಯಕ ಕಾರ್ಯ ನಿರ್ವಾಹಕ ಅಭಿಯಂತರರು (ಪಂಚಾಯತ್ ರಾಜ್ ಇಂಜಿನಿಂಯರಿಂಗ್ ಇಲಾಖೆ) | 31 | ಸದಸ್ಯರು |
| | ➢ ಆಡಳಿತ ವೈದ್ಯಾಧಿಕಾರಿ, ತಾಲ್ಲೂಕು ಆಸ್ಪತ್ರೆ | 32 | ಸದಸ್ಯರು |
| | ➢ ಆಡಳಿತ ವೈದ್ಯಾಧಿಕಾರಿ, ಸಮುದಾಯ ಆರೋಗ್ಯ ಕೇಂದ್ರ. | 33 ರಿಂದ 35 (ಅಥವಾ ವಾಸ್ತವಿಕ ಸಂಖ್ಯೆ) | ಸದಸ್ಯರುಗಳು |
| 15 | ತಾಲ್ಲೂಕು ಆರೋಗ್ಯಾಧಿಕಾರಿ | 36 | ಸದಸ್ಯ ಕಾರ್ಯದರ್ಶಿ |
| 16 | ನೋಡಲ್ ಎನ್.ಜಿ.ಓ. ಪ್ರತಿನಿಧಿ | 37 | ಸಹಾಯಕ ಸದಸ್ಯ ಕಾರ್ಯದರ್ಶಿ |

**ಇ.3. ಸದಸ್ಯತ್ವದ ಅವಧಿ:**

**ಇ.3.1.** ತಾಲ್ಲೂಕು ಪಂಚಾಯಿತಿಯಿಂದ, ತಾಲ್ಲೂಕು ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಗೆ ಆಯ್ಕೆಯಾಗಿರುವ ಪರಿಶಿಷ್ಠ ಜಾತಿ, ಪರಿಶಿಷ್ಠ ಪಂಗಡ, ಹಿಂದುಳಿದ, ಅಲ್ಪಸಂಖ್ಯಾತ ಮತ್ತು ಸಾಮಾನ್ಯ ಸದಸ್ಯರ ಸದಸ್ಯತ್ವದ ಅವಧಿ ಒಂದು ವರ್ಷ ಮಾತ್ರ ಆಗಿರತಕ್ಕದ್ದು ಮತ್ತು ತಾಲ್ಲೂಕು ಆರೋಗ್ಯ ಯೋಜನೆ ಮತ್ತು ಮಾನಿಟರಿಂಗೆ ಸಮಿತಿಯಿಂದ ಅವರು ನಿವೃತ್ತರಾಗತಕ್ಕದ್ದು.

**ಇ.3.2.** ಯಾವ ಮೀಸಲಾತಿ ಸದಸ್ಯರು ನಿವೃತ್ತರಾಗಿರುತ್ತಾರೋ ಬದಲಿಗೆ ಅದೇ ಮೀಸಲಾತಿಯ ಸದಸ್ಯರು ತಾಲ್ಲೂಕು ಪಂಚಾಯತಿ ವತಿಯಿಂದ ತಾಲ್ಲೂಕು ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಗೆ ಆಯ್ಕೆಯಾಗತಕ್ಕದ್ದು ಮತ್ತು ಅವರ ಅವಧಿ 1 ವರ್ಷಕ್ಕೆ ಸೀಮಿತ ವಾಗಿರತಕ್ಕದ್ದು.

**ಇ.3.3.** ತಾಲ್ಲೂಕು ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಯಿಂದ ನಿವೃತ್ತರಾದ ತಾಲ್ಲೂಕು ಪಂಚಾಯತಿ ಸದಸ್ಯರು, ಮರು ಆಯ್ಕೆಯಾಗಲು ಅರ್ಹರಾಗಿರುತ್ತಾರೆ.

**ಇ.4. ತಾಲ್ಲೂಕು ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಯ ಜವಾಬ್ದಾರಿಗಳು :**

**ಇ.4.1.** ಭಾರತ ಸರ್ಕಾರದ ಮಾರ್ಗಸೂಚಿಯನ್ವಯ ಸಮುದಾಯ ಮಾನಿಟರಿಂಗ್ ಕಾರ್ಯಗಳನ್ನು ಅರ್ಥಪೂರ್ಣವಾಗಿ ತಾಲ್ಲೂಕಿನ ವ್ಯಾಪ್ತಿಯಲ್ಲಿ ಅನುಷ್ಠಾನಗೊಳಿಸುವುದು. ತಾಲ್ಲೂಕಿನ ಕೇಂದ್ರ ಸ್ಥಳದಲ್ಲಿರುವ ತಾಲ್ಲೂಕು ಆಸ್ಪತ್ರೆ, ಸಮುದಾಯ ಆರೋಗ್ಯ ಕೇಂದ್ರಗಳು ಹಾಗೂ ಪ್ರಾಥಮಿಕ ಆರೋಗ್ಯ ಕೇಂದ್ರಗಳು ಸಮುದಾಯ ಮಾನಿಟರಿಂಗ್ ಪ್ರಕ್ರಿಯೆಯ ವ್ಯಾಪ್ತಿಗೆ ಒಳಪಡತಕ್ಕದ್ದು.

**ಇ.4.2.** 6 ತಿಂಗಳಿಗೊಂದು ಬಾರಿ ತಾಲ್ಲೂಕು ಮಟ್ಟದಲ್ಲಿ ಆರೋಗ್ಯ ಜನಸಂವಾದ ಕಾರ್ಯಕ್ರಮವನ್ನು ಹಮ್ಮಿಕೊಳ್ಳತಕ್ಕದ್ದು. ಮತ್ತು ಇದರಲ್ಲಿ ಆರೋಗ್ಯ ಇಲಾಖೆ, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ಮುಂತಾದ ಅನೇಕ ಇಲಾಖೆಗಳ ನೆರವಿನಿಂದ ವಿವಿಧ ಆರೋಗ್ಯ ಮತ್ತು ವೈದ್ಯಕೀಯ ಸೇವೆಗಳು ಮತ್ತು ಕೊರತೆಗಳ ಬಗ್ಗೆ ಸಾರ್ವಜನಿಕರಿಂದ ಅಭಿಪ್ರಾಯಪಡೆದು, ಸೇವೆಗಳನ್ನು ಉತ್ತಮಪಡಿಸುವಲ್ಲಿ ಸ್ಥಳೀಯವಾಗಿ ಕಾರ್ಯೋನ್ಮುಖರಾಗುವುದು.

**ಇ.4.3.** ತಾಲ್ಲೂಕಿನಲ್ಲಿರುವ ಎಲ್ಲಾ ಪ್ರಾಥಮಿಕ ಆರೋಗ್ಯ ಕೇಂದ್ರಗಳ ಆರೋಗ್ಯ ಯೋಜನೆಗಳನ್ನು ಕ್ರೋಢಿಕರಿಸಿ, ತಾಲ್ಲೂಕಿನ ವಾರ್ಷಿಕ ಆರೋಗ್ಯ ಯೋಜನೆಯನ್ನು ತಯಾರಿಸುವುದು.

**ಇ.4.4.** ತಾಲ್ಲೂಕಿನಲ್ಲಿರುವ ಪ್ರಾಥಮಿಕ ಆರೋಗ್ಯ ಕೇಂದ್ರ, ಸಮುದಾಯ ಆರೋಗ್ಯ ಕೇಂದ್ರ ಮತ್ತು ತಾಲ್ಲೂಕು ಆಸ್ಪತ್ರೆಯ ವ್ಯವಸ್ಥೆ, ಕ್ರಿಯಾಶೀಲತೆ, ಸೇವಾತತ್ಪರತೆ, ಸೇವಾಗುಣಮಟ್ಟ, ಸೇವಾವ್ಯಾಪ್ತಿ, ಪ್ರಮುಖ ಸಾಧನೆಗಳು ಮುಂತಾದವುಗಳ ಪರಿಶೀಲನೆ, ವ್ಯವಸ್ಥಾಪನೆ, ಸತ್ಯಾಪನೆ ಮತ್ತು ಸೇವೆಗಳನ್ನು ಉತ್ತಮ ಪಡಿಸಲು ಕ್ರಮ ಕೈಗೊಳ್ಳುವುದು.

**ಇ.4.5.** ಸಮುದಾಯ ಆರೋಗ್ಯ ಕೇಂದ್ರಗಳಲ್ಲಿ ಮೂಲಭೂತ ಸೌಕರ್ಯಗಳಾದ ಯಂತ್ರೋಪಕರಣ, ಔಷಧಿ, ನೀರು, ಸಂಪರ್ಕ, ಮಾನವ ಸಂಪನ್ಮೂಲ ಇತ್ಯಾದಿಗಳನ್ನು ಮೇಲ್ವಿಚಾರಣೆ ಮಾಡುವುದು.

**ಇ.4.6.** ಆರೋಗ್ಯ ಸೇವೆಯನ್ನು ಉತ್ತಮಗೊಳಿಸಲು ವಿವಿಧ ಆರೋಗ್ಯ ಸಂಸ್ಥೆಗಳ ಜೊತೆ ಸಮನ್ವಯಿಸುವುದು.

**ಇ.4.7.** ಸರ್ಕಾರಿ ಆರೋಗ್ಯ / ವೈದ್ಯಕೀಯ ಸೌಲಭ್ಯಗಳ ಗುಣಮಟ್ಟದ ಬಗ್ಗೆ ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸುವುದು ಮತ್ತು ಸೇವಾ ಬಳಕೆ ಹೆಚ್ಚಾಗುವಂತೆ ಅಗತ್ಯ ಜನಜಾಗೃತಿ ಅಭಿಯಾನ ಹಮ್ಮಿಕೊಳ್ಳುವುದು.

**ಇ.4.8.** ಆರೋಗ್ಯ / ವೈದ್ಯಕೀಯ ಸೇವೆ ನಿರಾಕರಣೆ ಸಂದರ್ಭಗಳಲ್ಲಿ ಸೂಕ್ತ ವಿಚಾರಣೆ ಮಾಡಿ ವರದಿಯನ್ನು 2 ತಿಂಗಳಲ್ಲಿ ಜಿಲ್ಲಾ ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಯ ಮುಂದೆ ಸಲ್ಲಿಸುವುದು.

**ಇ.4.9.** ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ/ ಗ್ರಾಮ ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿ ಹಾಗೂ ಪ್ರಾಥಮಿಕ ಆರೋಗ್ಯ ಕೇಂದ್ರದ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಯ ಕಾರ್ಯಚಟುವಟಿಕೆಗಳನ್ನು ಪರಿಶೀಲಿಸುವುದು.

**ಇ.4.10.** ಪ್ರತಿ ವರ್ಷಕ್ಕೊಮ್ಮೆ ಒಂದು ಬಾರಿ ತಾಲ್ಲೂಕು ಮಟ್ಟದಲ್ಲಿ ಜನ ಸಂವಾದ ಕಾರ್ಯಕ್ರಮಗಳನ್ನು ಸಂಘಟಿಸುವುದು.

**ಇ.4.11.** ತಾಲ್ಲೂಕಿನ ವ್ಯಾಪ್ತಿಯಲ್ಲಿ ವರದಿಯಾಗುವ ಪ್ರತಿಯೊಂದು ತಾಯಿ ಮತ್ತು ಶಿಶು ಮರಣವನ್ನು ದಾಖಲಿಸುವುದು ಹಾಗೂ ಇದಕ್ಕೆ ಕಾರಣವಾದ ಸೌಲಭ್ಯಗಳ ಕೊರತೆಯ ಬಗ್ಗೆ ಪರಿಶೀಲಿಸಿ, ಅಗತ್ಯ ನಿವಾರಣಾ ಕ್ರಮಗಳನ್ನು ಕೈಗೊಂಡು ಇನ್ನು ಮುಂದೆ ತಾಯಿ ಮತ್ತು ಶಿಶು ಮರಣ ಸಂಭವಿಸದಂತೆ ತಡೆಗಟ್ಟುವುದು.

**ಇ.4.12.** ಹೆಣ್ಣು ಭ್ರೂಣಹತ್ಯೆಗೆ ಕಾರಣವಾಗುವ ಸಾಮಾಜಿಕ ಆಯಾಮಗಳ ಬಗ್ಗೆ ಜನಜಾಗೃತಿ ಅಭಿಯಾನವನ್ನು ಎಲ್ಲಾ ಗ್ರಾಮಗಳಲ್ಲೂ ಗ್ರಾಮ ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್/ ಗ್ರಾಮ ನೈರ್ಮಲ್ಯ ಸಮಿತಿಯ ಸಹಯೋಗದೊಂದಿಗೆ ಹಮ್ಮಿಕೊಳ್ಳುವುದು ಹಾಗೂ ಇಂತಹ ಪ್ರಕರಣಗಳ ನಿಖರ ಮಾಹಿತಿಯನ್ನು ಜಿಲ್ಲಾ ಸಕ್ಷಮ ಪ್ರಾಧಿಕಾರ/ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿಗಳ ಗಮನಕ್ಕೆ ತರತಕ್ಕದ್ದು ಮತ್ತು ನಿರ್ದಿಷ್ಟ ಕ್ರಮಕ್ಕಾಗಿ ಒತ್ತಾಯಿಸತಕ್ಕದ್ದು.

**ಇ.4.13.** ವಿವಿಧ ಜನಪರ ಆರೋಗ್ಯ ಕಾರ್ಯಕ್ರಮಗಳಾದ ಪ್ರಸೂತಿ ಆರೈಕೆ, ಜನನಿ ಸುರಕ್ಷಾ ಯೋಜನೆ, ಮಡಿಲು ಮತ್ತು ತಾಯಿ ಭಾಗ್ಯದ ಸವಲತ್ತುಗಳನ್ನು ಪಡೆದ ಫಲಾನುಭವಿಗಳ ಸತ್ಯಾಪನೆ ಮಾಡುವುದು.

**ಇ.5 ಸಮಿತಿಯ ಸಭೆ :**

**ಇ.5.1.** "3 ತಿಂಗಳಿಗೊಮ್ಮೆ," ತಿಂಗಳ 15 ನೇ ತಾರೀಕಿನ ಅಪರಾಹ್ನ ಕಡ್ಡಾಯವಾಗಿ ತಾಲ್ಲೂಕು ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಯ ಸಾಮಾನ್ಯ ಸಭೆಯನ್ನು, ಸಮಿತಿಯ ಕಾರ್ಯದರ್ಶಿಯವರು, 3 ದಿವಸಗಳ ಪೂರ್ಣಾವಧಿ ನೋಟೀಸ್ ನೀಡಿ ಕರೆಯತಕ್ಕದ್ದು ಮತ್ತು ಸಭೆಯನ್ನು ತಾಲ್ಲೂಕು ಪಂಚಾಯತಿ ಸಭಾಂಗಣದಲ್ಲಿ ನಡೆಸತಕ್ಕದ್ದು. ತಿಂಗಳ 15 ನೇ

ತಾರೀಕು ಸಾರ್ವಜನಿಕ ರಜಾದಿನವಾಗಿದ್ದ ಪಕ್ಷದಲ್ಲಿ ಸಭೆಯನ್ನು ಮರುದಿನ ನಡೆಸತಕ್ಕದ್ದು. ತುರ್ತು ಸಂದರ್ಭದಲ್ಲಿ ವಿಶೇಷ ಸಭೆಯನ್ನು 24 ಘಂಟೆ ನೋಟೀಸ್ ನೀಡುವ ಮೂಲಕ ಕರೆಯಬಹುದಾಗಿರುತ್ತದೆ.

**ಇ.5.2.** ಸಭೆಗಾಗಿ ಕಾರ್ಯಸೂಚಿಯನ್ನು ಮುಂಚಿತವಾಗಿ ಸಿದ್ದಪಡಿಸಿ, ಎಲ್ಲಾ ಸದಸ್ಯರಿಗೂ 3 ದಿವಸಗಳ ಮುಂಚಿತವಾಗಿ ಸಭಾ ತಿಳುವಳಿಕೆ ಪತ್ರದೊಡನೆ ನೀಡಿ ಸ್ವೀಕೃತಿಯನ್ನು ಪಡೆದಿರಬೇಕು.

**ಇ.5.3.** ಸಭೆ ನಡೆಸಲು ಸದಸ್ಯರ ಕೋರಂ, ಒಟ್ಟು ಸದಸ್ಯರ ಸಂಖ್ಯೆಯ 1/3 ರಷ್ಟು ಆಗಿರತಕ್ಕದ್ದು.

ಹಾಗೂ ಭಾಗವಹಿಸಿದ ಸದಸ್ಯರಲ್ಲಿ ಕನಿಷ್ಟ ಪಕ್ಷ 1/3 ರಷ್ಟು ಮಹಿಳಾ ಸದಸ್ಯರು ಹಾಜರಿರತಕ್ಕದ್ದು.

**ಇ.5.4.** ಸಭೆ ಪ್ರಾರಂಭಿಸಲು ಕೋರಂ ಇಲ್ಲದಿದ್ದರೆ ಸಭೆಯ ಅಧ್ಯಕ್ಷರು 30 ನಿಮಿಷಗಳವರೆಗೆ ಕಾಯತಕ್ಕದ್ದು. ನಂತರದಲ್ಲೂ ಕೋರಂ ಇಲ್ಲದಿದ್ದರೆ ಸಭೆಯನ್ನು ಆ ತಿಂಗಳಲ್ಲೇ ಮುಂದಿನ ಅನುಕೂಲಕರ ದಿನಾಂಕಕ್ಕೆ ಮುಂದೂಡಿ ಹೊಸ ನೋಟೀಸ್ ನೀಡತಕ್ಕದ್ದು.

**ಇ.5.5.** ಸಭೆಯ ದಿನದಂದು ಯಾವುದೇ ಕಾರಣಕ್ಕಾಗಿ ಅಧ್ಯಕ್ಷರು ಗೈರು ಹಾಜರಾಗಿದ್ದರೆ, ಕೋರಂ ಇದ್ದರೆ, ಸಭೆಯಲ್ಲಿರುವ ಸರ್ವಸಮ್ಮತವಾದ ಸದಸ್ಯರಲ್ಲೊಬ್ಬರು ಅಧ್ಯಕ್ಷತೆ ವಹಿಸಿ ಸಭೆ ನಡೆಸ ಬಹುದಾಗಿರುತ್ತದೆ.

**ಇ.5.6.** ಸಭೆಯ ನಡವಳಿಕೆ ಮತ್ತು ನಿರ್ಣಯಗಳನ್ನು ಅಧಿಕೃತ ಪುಸ್ತಕದಲ್ಲಿ ದಾಖಲಿಸಿ ಸದಸ್ಯರ ಸಹಿ ಪಡೆದು ಪ್ರತಿಗಳನ್ನು ಜಿಲ್ಲಾ ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿ, ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಂಘ ಹಾಗೂ ಜಿಲ್ಲಾ ಆರೋಗ್ಯ ಅಭಿಯಾನ ಸಮಿತಿಗೆ ಸಲ್ಲಿಸುವ ಹಾಗೂ ದಾಖಲೆಗಳನ್ನು ಸುಸ್ಥಿತಿಯಲ್ಲಿಡುವ ಜವಾಬ್ದಾರಿ ಕಾರ್ಯದರ್ಶಿ ಯದ್ದಾಗಿರುತ್ತದೆ. ಇದಕ್ಕಾಗಿ ಸಹ ಕಾರ್ಯದರ್ಶಿಯವರು, ಕಾರ್ಯದರ್ಶಿಯವರಿಗೆ ಎಲ್ಲಾ ಸಹಕಾರ ನೀಡತಕ್ಕದ್ದು.

**ಇ.6. ಖರ್ಚುವೆಚ್ಚ:**

**ಇ.6.1** ಸಮಿತಿಯ ಸದಸ್ಯರ ಬಸ್ ಪ್ರಯಾಣದ ಕನಿಷ್ಠ ವೆಚ್ಚ ಮತ್ತು ಸಭೆಯ ದಿನದಂದು ಅವಶ್ಯವಿರುವ ಕನಿಷ್ಟ ಸಾದಿಲ್ವಾರು ವೆಚ್ಚವನ್ನು ತಾಲ್ಲೂಕು ಆರೋಗ್ಯಾಧಿಕಾರಿ ಕಛೇರಿಗೆ ನೀಡಲಾಗುವ ನಿರ್ವಹಣಾ ವೆಚ್ಚದಿಂದ ಭರಿಸತಕ್ಕದ್ದು.

**ಇ.6.2** ತಾಲ್ಲೂಕು ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿವತಿಯಿಂದ ಯಾವುದೇ ಆರೋಗ್ಯ ಶಿಕ್ಷಣ ಕಾರ್ಯಕ್ರಮ ಅಥವಾ ಅಭಿಯಾನವನ್ನು ಹಮ್ಮಿಕೊಂಡ ಪಕ್ಷದಲ್ಲಿ, ಈಗಾಗಲೇ ಅಂತಹ ಕಾರ್ಯಕ್ರಮಕ್ಕಾಗಿ ಇಲಾಖಾವತಿಯಿಂದಾಗಲೀ ಅಥವಾ ಎನ್.ಆರ್.ಹೆಚ್.ಎಂ ಕಾರ್ಯಕ್ರಮದ ವತಿಯಿಂದಾಗಲೀ ನಿಗದಿ ಪಡಿಸಿ ಬಿಡುಗಡೆ ಮಾಡಿರುವ ಅನುದಾನವನ್ನು ಬಳಸತಕ್ಕದ್ದು. ಲಾಜಿಸ್ಟಿಕ್ಸ್‌ಗೆ ಬೇಕಾಗಬಹುದಾದ ಹೆಚ್ಚುವರಿ ವೆಚ್ಚವನ್ನು ತಾಲ್ಲೂಕು ಆರೋಗ್ಯ ಕಛೇರಿಗೆ ನೀಡಲಾಗಿರುವ ನಿರ್ವಹಣಾ ವೆಚ್ಚದಿಂದ ಭರಿಸತಕ್ಕದ್ದು.

**ಇ.6.3.** ತಾಲ್ಲೂಕಿನ ಇತರ ಇಲಾಖೆಗಳ ಜನಪರ ಕಾರ್ಯಕ್ರಮಗಳ ಮಾಹಿತಿ ಶಿಕ್ಷಣ ಮತ್ತು ಸಂವಹನಕ್ಕೆ ಬಿಡುಗಡೆ ಮಾಡಿರುವ ಮತ್ತು ಲಭ್ಯವಿರುವ ಅನುದಾನವನ್ನು ಕ್ರೋಢೀಕರಿಸಿ, ಸಂಯೋಜಿತ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳತಕ್ಕದ್ದು.

ಇ.7 ತಾಲ್ಲೂಕು ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಕಾರ್ಯಕಾರಿ ಸಮಿತಿ :

**ಇ.7.1. ರಚನೆ:** ತಾಲ್ಲೂಕಿನ, ತಾಲ್ಲೂಕು ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಯ ಉಪಸಮಿತಿಯಾಗಿ ಕೆಳಕಂಡಂತೆ ಸದಸ್ಯರನ್ನು ಒಳಗೊಂಡಂತೆ "ಕಾರ್ಯಕಾರಿ ಸಮಿತಿ" ರಚಿಸತಕ್ಕದ್ದು.

| | | |
|---|---|---|
| 1 | ತಾಲ್ಲೂಕು ಪಂಚಾಯತಿಯ ಕಾರ್ಯ ನಿರ್ವಹಣಾಧಿಕಾರಿ | ಅಧ್ಯಕ್ಷರು |
| 2 | ತಾಲ್ಲೂಕು ಆರೋಗ್ಯ ಮತ್ತು ಯೋಜನಾ ಮಾನಿಟರಿಂಗ್ ಸಮಿತಿಯ ಪರಿಶಿಷ್ಠ ಜಾತಿ/ಪರಿಶಿಷ್ಠ ಪಂಗಡದ ಮಹಿಳಾ ತಾಲ್ಲೂಕು ಪಂಚಾಯತಿ ಸದಸ್ಯೆ | ಸದಸ್ಯರು |
| 3 | ತಾಲ್ಲೂಕು ಆರೋಗ್ಯ ಮತ್ತು ಯೋಜನಾ ಮಾನಿಟರಿಂಗ್ ಸಮಿತಿಯ ಹಿಂದುಳಿದ/ಅಲ್ಪಸಂಖ್ಯಾತ ಮಹಿಳಾ ಅಥವಾ ಪುರುಷ ತಾಲ್ಲೂಕು ಪಂಚಾಯತಿ ಸದಸ್ಯೆ/ಸದಸ್ಯ | ಸದಸ್ಯರು |
| 4 | ತಾಲ್ಲೂಕು ಆರೋಗ್ಯ ಮತ್ತು ಯೋಜನಾ ಮಾನಿಟರಿಂಗ್ ಸಮಿತಿಯಲ್ಲಿ ಸದಸ್ಯರಾಗಿರುವ, ಪ್ರಾಥಮಿಕ ಆರೋಗ್ಯ ಕೇಂದ್ರ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಯ ಅಧ್ಯಕ್ಷರು | ಸದಸ್ಯರು |
| 5 | ತಾಲ್ಲೂಕು ಆರೋಗ್ಯ ಮತ್ತು ಯೋಜನಾ ಮಾನಿಟರಿಂಗ್ ಸಮಿತಿಯಲ್ಲಿ ಸದಸ್ಯರಾಗಿರುವ ಸ್ವಯಂ ಸೇವಾ ಸಂಸ್ಥೆಯ ಒಬ್ಬ ಪ್ರತಿನಿಧಿ | ಸದಸ್ಯರು |
| 6 | ತಾಲ್ಲೂಕು ಶಿಶು ಅಭಿವೃದ್ದಿ ಯೋಜನಾಧಿಕಾರಿ | ಸದಸ್ಯರು |
| 7 | ತಾಲ್ಲೂಕು ಆರೋಗ್ಯಾಧಿಕಾರಿ | ಸದಸ್ಯ ಕಾರ್ಯದರ್ಶಿ |
| 8 | ನೋಡಲ್ ಎನ್.ಜಿ.ಓ. ಪ್ರತಿನಿಧಿ | ಸಹಾಯಕ ಸದಸ್ಯ ಕಾರ್ಯದರ್ಶಿ |

**ಇ.7.2. ಉಪಸಮಿತಿಯ ಜವಾಬ್ದಾರಿಗಳು :**

**ಇ.7.2.1.** "ಇ.4" ರಲ್ಲಿ ತಾಲ್ಲೂಕು ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಗೆ ನೀಡಿರುವ ಎಲ್ಲಾ ಜವಾಬ್ದಾರಿಗಳು ಉಪಸಮಿತಿಗೂ ಅನ್ವಯವಾಗತಕ್ಕದ್ದು.

**ಇ.7.2.2.** ವಿಶೇಷವಾಗಿ ಇತರ ಇಲಾಖೆಗಳೊಂದಿಗೆ ಸಮನ್ವಯತೆ, ಸಂಪನ್ಮೂಲ ಕ್ರೂಢೀಕರಣ ಮತ್ತು ಆರೋಗ್ಯ ಹಾಗೂ ನೈರ್ಮಲ್ಯ ಹಿತದೃಷ್ಠಿಯಿಂದ ಸಂಯೋಜಿತ ಕಾರ್ಯಕ್ರಮಗಳ ಅನುಷ್ಠಾನದ ಬಗ್ಗೆ ಉಪಸಮಿತಿಯು ಕಾರ್ಯೋನ್ಮುಖವಾಗತಕ್ಕದ್ದು.

**ಇ.7.2.3.** ತಾಲ್ಲೂಕಿನಲ್ಲಿರುವ ಕಠಿಣ ಪ್ರದೇಶಗಳಲ್ಲಿ ವಾಸಿಸುವ ಸಾರ್ವಜನಿಕರಿಗೆ ಆರೋಗ್ಯ ಮತ್ತು ವೈದ್ಯಕೀಯ ಸೇವೆಗಳನ್ನು ತಲುಪಿಸುವಲ್ಲಿ ಪರಿಣಾಮಕಾರಿ ಕ್ರಿಯಾ ಯೋಜನೆ ಹಮ್ಮಿಕೊಳ್ಳತಕ್ಕದ್ದು.

**ಇ.7.2.5.** ತಾಲ್ಲೂಕಿನ ವಿವಿಧ ಭಾಗಗಳಲ್ಲಿ ವಾಸವಾಗಿರುವ ಗುಡ್ಡಗಾಡು ಜನರು ಮತ್ತು ಹಿಂದುಳಿದವರು ಸಾಮಾನ್ಯವಾಗಿ ಇಲಾಖೆಯ ಸೇವೆಗಳನ್ನು ಪಡೆಯಲು ಇರುವ ಅಡಚಣೆಗಳನ್ನು ನಿವಾರಿಸಿ ಸೇವಾಸೌಲಭ್ಯವನ್ನು ಉತ್ತಮಪಡಿಸತಕ್ಕದ್ದು.

**ಇ.7.2.6.** ತಾಲ್ಲೂಕಿನಲ್ಲಿ ಆರೋಗ್ಯ ಮತ್ತು ಸಾಮಾಜಿಕ ಅಭಿವೃದ್ಧಿ ಸೂಚ್ಯಂಕಗಳಾದ ತಾಯಿ ಮರಣ, ಶಿಶು ಮರಣ ಪ್ರಮಾಣ ಮತ್ತು ಒಟ್ಟು ಫಲವತ್ತತೆಯ ಪ್ರಮಾಣವನ್ನು ವಾರ್ಷಿಕವಾಗಿ ಲೆಕ್ಕ ಮಾಡಿ ಮಿಲೇನಿಯಮ್ ಅಭಿವೃದ್ಧಿ ಸೂಚ್ಯಂಕಗಳನ್ನು ನಿಗಧಿತ ವೇಳೆಗಿಂತ ಮುಂಚಿತವಾಗಿ ತಲುಪತಕ್ಕದ್ದು.

**ಇ.7.3. ಸಮಿತಿಯ ಸಭೆ :**

ಪ್ರತಿ ತಿಂಗಳು ಎರಡನೇ ಮಂಗಳವಾರದಂದು ಕಡ್ಡಾಯವಾಗಿ ತಾಲ್ಲೂಕು ಪಂಚಾಯತಿಯ ಕಾರ್ಯನಿರ್ವಹಣಾಧಿಕಾರಿಯ ಕಛೇರಿಯಲ್ಲಿ ಸಭೆ ಸೇರತಕ್ಕದ್ದು. ತುರ್ತು ಸಂದರ್ಭದಲ್ಲಿ ವಿಶೇಷ ಸಭೆಯನ್ನು ಸದಸ್ಯ ಕಾರ್ಯದರ್ಶಿಗಳು ಅಧ್ಯಕ್ಷರ ಅಪ್ಪಣೆಯ ಮೇರೆಗೆ ಕರೆಯಬೇಕು ಮತ್ತು ಸಭಾನಡವಳಿ ಹಾಗೂ ತೀರ್ಮಾನಗಳನ್ನು, ಮುಂಬರುವ ತಾಲ್ಲೂಕು ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಯ ಸಾಮಾನ್ಯ ಸಭೆಯಲ್ಲಿ ಮಂಡಿಸತಕ್ಕದ್ದು.

**ಇ.7.4. ಖರ್ಚು ವೆಚ್ಚ :**

ಅಗತ್ಯವಿರುವ ಸಾದಿಲ್ವಾರು ಖರ್ಚುವೆಚ್ಚವನ್ನು ತಾಲ್ಲೂಕು ಆರೋಗ್ಯ ಕಛೇರಿಗೆ ಬಿಡುಗಡೆ ಮಾಡಿರುವ ನಿರ್ವಹಣಾ ವೆಚ್ಚದಿಂದ ಭರಿಸತಕ್ಕದ್ದು.

**ಈ. ಜಿಲ್ಲಾ ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿ :**

**ಈ.1. ವ್ಯಾಪ್ತಿ :**

ಜಿಲ್ಲೆಯ ಭೌಗೋಳಿಕ ಪ್ರದೇಶಕ್ಕೆ ಸೀಮಿತವಾಗಿರುವಂತೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ, ಸಾಂಕ್ರಾಮಿಕ ರೋಗಗಳ ಕಾರಣಗಳು ಮತ್ತು ಸಾಮಾಜಿಕ ಆಯಾಮಗಳು ತಾಯಿ ಮಕ್ಕಳ ಆರೋಗ್ಯ, ಸಮಗ್ರ ತಾಯಿ ಭಾಗ್ಯ ಮುಂತಾದ ಸೇವೆಗಳ/ಯೋಜನೆಗಳ ಗುಣಮಟ್ಟದ ಅನುಷ್ಠಾನ, ಉಪಕೇಂದ್ರ ಪ್ರಾಥಮಿಕ ಆರೋಗ್ಯ ಕೇಂದ್ರ, ತಾಲ್ಲೂಕು ಆಸ್ಪತ್ರೆ, ಸಮುದಾಯ ಆರೋಗ್ಯ ಕೇಂದ್ರ ಮತ್ತು ಜಿಲ್ಲಾ ಆಸ್ಪತ್ರೆಯಿಂದ ದೊರೆಯುವ ವೈದ್ಯಕೀಯ ಗುಣಮಟ್ಟದ ಸೇವೆಗಳ ಬಗ್ಗೆ ಚಿಂತನೆ, ಪರಿಶೀಲನೆ, ಪರಾಮರ್ಶೆ, ಮಹಿಳೆಯರ ಸಬಲೀಕರಣ, ಲಿಂಗ ತಾರತಮ್ಯ ನಿವಾರಣೆ, ಆರೋಗ್ಯ, ವಿಶೇಷವಾಗಿ ತಾಯಿ ಮಕ್ಕಳ ಆರೋಗ್ಯದ ದೃಷ್ಟಿಕೋನದಿಂದ, ವಿವಿಧ ಇಲಾಖೆಗಳ ಸಮನ್ವಯತೆ, ವೈದ್ಯಕೀಯ/ಆರೋಗ್ಯ ಸೇವೆಗಳ ಬಗ್ಗೆ ಚಿಂತನೆ, ಪರಾಮರ್ಶೆ ಮುಂತಾದ ಅನೇಕ ವಿಷಯಗಳ ಬಗ್ಗೆ ಉಪಯುಕ್ತ ಚರ್ಚೆ ಮತ್ತು ತೀಮಾನಗಳಿಗಾಗಿ ಜಿಲ್ಲಾ ಮಟ್ಟದಲ್ಲಿ ಒಂದು ಜಿಲ್ಲಾ ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಯನ್ನು ರಚಿಸತಕ್ಕದ್ದು.

**ಈ.2. ರಚನೆ :**

ಜಿಲ್ಲಾ ಮಟ್ಟದಲ್ಲಿ ರಚಿಸಲಾಗುವ ಜಿಲ್ಲಾ ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಯು ಕೆಳಕಂಡಂತೆ ಸದಸ್ಯರುಗಳನ್ನು ಹೊಂದಿರತಕ್ಕದ್ದು:

| | | | |
|---|---|---|---|
| 1 | ಜಿಲ್ಲಾ ಪಂಚಾಯತಿಯ ಅಧ್ಯಕ್ಷರು | ಸಂಚಿತ ಗಣನೆ–1 | ಅಧ್ಯಕ್ಷರು |
| 2 | ಜಿಲ್ಲಾಧಿಕಾರಿ | 2 | ಸಹ ಅಧ್ಯಕ್ಷರು |
| 3 | ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ | 3 | ಉಪಾಧ್ಯಕ್ಷರು |
| 4 | ಜಿಲ್ಲಾ ಪಂಚಾಯತಿಯ ಉಪಾಧ್ಯಕ್ಷರು | 4 | ಸದಸ್ಯರು |
| 5 | ಜಿಲ್ಲಾ ಪಂಚಾಯತಿಯ ಆರೋಗ್ಯ ಮತ್ತು ಶಿಕ್ಷಣ ಸ್ಥಾಯಿ ಸಮಿತಿಯ ಅಧ್ಯಕ್ಷರು. | 5 | ಸದಸ್ಯರು |
| 6 | ಜಿಲ್ಲಾ ಪಂಚಾಯತಿಯ ಸಾಮಾಜಿಕ ನ್ಯಾಯ ಸ್ಥಾಯಿ ಸಮಿತಿಯ ಅಧ್ಯಕ್ಷರು, | 6 | ಸದಸ್ಯರು |

| | | | |
|---|---|---|---|
| 7 | ಜಿಲ್ಲಾ ಪಂಚಾಯತಿಯ ಕೃಷಿ ಮತ್ತು ಕೈಗಾರಿಕಾ ಸ್ಥಾಯಿ ಸಮಿತಿಯ ಅಧ್ಯಕ್ಷರು, | 7 | ಸದಸ್ಯರು |
| 8 | ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಮಹಿಳಾ ಜಿಲ್ಲಾ ಪಂಚಾಯತಿ ಸದಸ್ಯೆ. | 8 | ಸದಸ್ಯರು |
| 9 | ಹಿಂದುಳಿದ/ಅಲ್ಪಸಂಖ್ಯಾತ ಮಹಿಳಾ ಜಿಲ್ಲಾ ಪಂಚಾಯತಿ ಸದಸ್ಯೆ. | 9 | ಸದಸ್ಯರು |
| 10 | ಸಾಮಾನ್ಯ ವರ್ಗದ ಮಹಿಳಾ ಅಥವಾ ಪುರುಷ ಜಿಲ್ಲಾ ಪಂಚಾಯತಿ ಸದಸ್ಯೆ/ಸದಸ್ಯ. | 10 | ಸದಸ್ಯರು |
| 11 | ಜಿಲ್ಲಾ ವ್ಯಾಪ್ತಿಯ ಎಲ್ಲಾ ತಾಲ್ಲೂಕು ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಯ ಅಧ್ಯಕ್ಷರುಗಳು | 11 ರಿಂದ 17 (ಅಥವಾ ವಾಸ್ತವ ಸಂಖ್ಯೆ) | ಸದಸ್ಯರು |
| 12 | ಜಿಲ್ಲೆಯಲ್ಲಿರುವ ಪ್ರತಿಷ್ಠಿತ ಸಮಾಜ ಸೇವಕರು/ ದಾನಿಗಳು/ ಸಂಸ್ಥೆಗಳು | 18 | ಸದಸ್ಯರು |
| 13 | ಭಾರತೀಯ ವೈದ್ಯಕೀಯ ಸಂಘ, ಜಿಲ್ಲಾ ಘಟಕದ ಅಧ್ಯಕ್ಷರು | 19 | ಸದಸ್ಯರು |
| 14 | ರೆಡ್ ಕ್ರಾಸ್ ಸಂಸ್ಥೆಯ ಜಿಲ್ಲಾ ಘಟಕದ ಅಧ್ಯಕ್ಷರು | 20 | ಸದಸ್ಯರು |
| 15 | ಜಿಲ್ಲೆಯಲ್ಲಿ ಆರೋಗ್ಯ ಸೇವಾ ಕ್ಷೇತ್ರದಲ್ಲಿ ಕಾರ್ಯ ನಿರತರಾಗಿರುವ ಸ್ವಯಂ ಸೇವಾಸಂಸ್ಥೆಯ ಪ್ರತಿನಿಧಿಗಳು. | 21 ರಿಂದ 23 (ಅಥವಾ ವಾಸ್ತವ ಸಂಖ್ಯೆ) | ಸದಸ್ಯರು |
| 16 | ಪದನಿಮಿತ್ತ ಸರ್ಕಾರಿ ಪ್ರತಿನಿಧಿಗಳು | | |
| I | ➢ ಉಪ ಕಾರ್ಯದರ್ಶಿ (ಅಭಿವೃದ್ಧಿ) | 24 | ಸದಸ್ಯರು |
| II | ➢ ಜಿಲ್ಲಾ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಉಪ ನಿರ್ದೇಶಕರು. | 25 | ಸದಸ್ಯರು |
| III | ➢ ಜಿಲ್ಲಾ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರು. | 26 | ಸದಸ್ಯರು |
| IV | ➢ ಜಿಲ್ಲಾ ಪದವಿ ಪೂರ್ವ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರು. | 27 | ಸದಸ್ಯರು |
| V | ➢ ಕಾರ್ಯ ನಿರ್ವಾಹಕ ಅಭಿಯಂತರರು (ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ) | 28 | ಸದಸ್ಯರು |
| VI | ➢ ಜಿಲ್ಲಾ ಶಸ್ತ್ರ ಚಿಕಿತ್ಸಕರು, ಜಿಲ್ಲಾ ಆಸ್ಪತ್ರೆ | 29 | ಸದಸ್ಯರು |
| VII | ➢ ಜಿಲ್ಲಾ ಎನ್.ಆರ್.ಹೆಚ್.ಎಂ. ಯೋಜನಾ ವ್ಯವಸ್ಥಾಪಕರು (ಡಿ.ಪಿ.ಎಂ.) | 30 | ಸದಸ್ಯರು |
| VIII | ➢ ಎಲ್ಲಾ ತಾಲ್ಲೂಕು ಆರೋಗ್ಯಾಧಿಕಾರಿಗಳು | 31 ರಿಂದ 37(ಅಥವಾ ವಾಸ್ತವ ಸಂಖ್ಯೆ) | ಸದಸ್ಯರು |
| IX | ➢ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ | 38 | ಸದಸ್ಯ ಕಾರ್ಯದರ್ಶಿ |
| X | ➢ ನೋಡಲ್ ಎನ್.ಜಿ.ಓ. ಪ್ರತಿನಿಧಿ | 39 | ಸಹಾಯಕ ಸದಸ್ಯ ಕಾರ್ಯದರ್ಶಿ |

**ಈ.3. ಜಿಲ್ಲಾ ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಯ ಜವಾಬ್ದಾರಿಗಳು :**

**ಈ.3.1.** ಭಾರತ ಸರ್ಕಾರದ ಮಾರ್ಗಸೂಚಿಯನ್ವಯ ಸಮುದಾಯ ಮಾನಿಟರಿಂಗ್ ಕಾರ್ಯಗಳನ್ನು ಅರ್ಥಪೂರ್ಣವಾಗಿ ಜಿಲ್ಲೆಯ ವ್ಯಾಪ್ತಿಯಲ್ಲಿ ಅನುಷ್ಠಾನಗೊಳಿಸುವುದು. ಪ್ರಮುಖವಾಗಿ ಹಿಂದುಳಿದ ತಾಲ್ಲೂಕುಗಳಲ್ಲಿರುವ ಆರೋಗ್ಯ ಮತ್ತು ವೈದ್ಯಕೀಯ ಸಂಸ್ಥೆಗಳು ಸಮರ್ಪಕವಾಗಿ ಸೇವೆ ನೀಡುವಲ್ಲಿ ಅಗತ್ಯ ಕಾರ್ಯಕ್ರಮಗಳನ್ನು ಆದ್ಯತೆ ಮೇಲೆ ಹಮ್ಮಿಕೊಳ್ಳತಕ್ಕದ್ದು.

**ಈ.3.2.** ವರ್ಷಕ್ಕೊಂದು ಬಾರಿ ಜಿಲ್ಲಾ ಮಟ್ಟದಲ್ಲಿ ಆರೋಗ್ಯ ಜನಸಂವಾದ ಕಾರ್ಯಕ್ರಮವನ್ನು ಹಮ್ಮಿಕೊಳ್ಳತಕ್ಕದ್ದು. ಮತ್ತು ಇದರಲ್ಲಿ ಆರೋಗ್ಯ, ಮಹಿಳಾ ಮತ್ತು ಮಕ್ಕಳ ಕಲ್ಯಾಣ, ಕುಡಿಯುವ ನೀರು ಮತ್ತು ನೈರ್ಮಲ್ಯ, ಕಾಮಗಾರಿ, ಸಾಮಾಜಿಕ

ಅರಣ್ಯ, ಬುಡಕಟ್ಟು ಜನಾಂಗದ ಅಭಿವೃದ್ಧಿ, ಪಡಿತರ ವಿತರಣೆ, ಕಾರ್ಮಿಕ ಇಲಾಖೆ ಮುಂತಾದ ಅನೇಕ ಇಲಾಖೆಗಳ ನೆರವಿನಿಂದ ವಿವಿಧ ಆರೋಗ್ಯ ಮತ್ತು ವೈದ್ಯಕೀಯ ಸೇವೆಗಳ, ಸಮಸ್ಯೆಗಳ ಹಾಗೂ ಕೊರತೆಗಳ ಬಗ್ಗೆ ಸಾರ್ವಜನಿಕರಿಂದ ಅಭಿಪ್ರಾಯಪಡೆದು, ಸೇವೆಗಳನ್ನು ಉತ್ತಮಪಡಿಸುವಲ್ಲಿ ಸ್ಥಳೀಯವಾಗಿ ಕ್ರಮ ಕೈಗೊಳ್ಳುವುದು.

**ಈ.3.3**. ಆರೋಗ್ಯ ಕೇಂದ್ರ/ಸಮುದಾಯ ಆರೋಗ್ಯ ಕೇಂದ್ರ, ತಾಲ್ಲೂಕು ಆಸ್ಪತ್ರೆಗಳಲ್ಲಿ ದೊರೆಯುವ ಸವಲತ್ತುಗಳು, ಸೇವಾ ವಿವರಗಳು ಮತ್ತು ಸೇವಾ ವೇಳಾಪಟ್ಟಿ ಹಾಗೂ ಉಚಿತ ಸೇವೆಗಳ ಬಗ್ಗೆ ಜನರಿಗೆ ಮಾಹಿತಿ ನೀಡುವ ನಾಗರೀಕ ಸನ್ನದುಗಳ ಫಲಕ ಹಾಕಿಸುವುದು. ನಾಗರಿಕರಿಗೆ ಆರೋಗ್ಯ ಸೇವೆ ಉತ್ತಮ ಪಡಿಸಲು ಅನುಕೂಲವಾಗುವಂತೆ ಸಲಹಾ ಪೆಟ್ಟಿಗೆ ಇರಿಸುವುದು.

**ಈ.3.4**. ಪ್ರಾಥಮಿಕ ಆರೋಗ್ಯ ಕೇಂದ್ರ/ಸಮುದಾಯ ಆರೋಗ್ಯ ಕೇಂದ್ರ/ತಾಲ್ಲೂಕು ಆಸ್ಪತ್ರೆಗಳಲ್ಲಿನ ಸೇವಾ ಗುಣಮಟ್ಟ, ರೆಫರಲ್ ಸೇವೆಗಳ ಉಪಯುಕ್ತತೆ ಹಾಗೂ ಬಳಕೆ ಬಗ್ಗೆ ಪ್ರಗತಿ ವರದಿ ಪರಿಶೀಲನೆ ಮಾಡುವುದು.

**ಈ.3.5**. ಸರ್ಕಾರಿ ಆರೋಗ್ಯ / ವೈದ್ಯಕೀಯ ಸೌಲಭ್ಯಗಳ ಗುಣಮಟ್ಟದ ಬಗ್ಗೆ ಸಾರ್ವಜನಿಕರಲ್ಲಿ ಜಾಗೃತಿ ಮೂಡಿಸುವುದು ಮತ್ತು ಸೇವಾಬಳಕೆ ಹೆಚ್ಚಾಗುವಂತೆ ಅಗತ್ಯ ಜನಜಾಗೃತಿ ಅಭಿಯಾನ ಹಮ್ಮಿಕೊಳ್ಳುವುದು.

**ಈ.3.6**. ಆರೋಗ್ಯ /ವೈದ್ಯಕೀಯ ಸೇವೆ ನಿರಾಕರಣೆ ಸಂದರ್ಭದಲ್ಲಿ ಸೂಕ್ತ ಪರಿಹಾರ ಕ್ರಮ ಕೈಗೊಂಡು ಸೇವಾ ವ್ಯವಸ್ಥೆಯನ್ನು ಉತ್ತಮ ಪಡಿಸುವುದು.

**ಈ.3.7**. ಜಿಲ್ಲೆಯ ವಿವಿಧ ಹಂತದ ಆರೋಗ್ಯ ಸಂಸ್ಥೆಗಳಲ್ಲಿರುವ ಸಮಿತಿಗಳ (ಗ್ರಾಮ ಆರೋಗ್ಯ ಮತ್ತು ನೈರ್ಮಲ್ಯ/ಗ್ರಾಮ ಆರೋಗ್ಯ ಯೋಜನ ಮತ್ತು ಮಾನಿಟರಿಂಗ್ ಸಮಿತಿ, ಪ್ರಾಥಮಿಕ ಆರೋಗ್ಯ ಕೇಂದ್ರದ ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿ ಹಾಗೂ ತಾಲ್ಲೂಕು ಯೋಜನಾ ಮತ್ತು ಮಾನಿಟರಿಂಗ್ ಸಮಿತಿ, ಕಾರ್ಯ ಚಟುವಟಿಕೆಗಳನ್ನು ಪರಿಶೀಲಿಸುವುದು.

**ಈ.3.8**. ಜಿಲ್ಲೆಯ ವ್ಯಾಪ್ತಿಯಲ್ಲಿ ವರದಿಯಾಗುವ ಪ್ರತಿಯೊಂದು ತಾಯಿ ಮತ್ತು ಶಿಶು ಮರಣವನ್ನು ದಾಖಲಿಸುವುದು ಹಾಗೂ ಇದಕ್ಕೆ ಕಾರಣವಾದ ಸೌಲಭ್ಯಗಳ ಕೊರತೆಯ ಬಗ್ಗೆ ಪರಿಶೀಲಿಸಿ, ಅಗತ್ಯ ನಿವಾರಣಾ ಕ್ರಮಗಳನ್ನು ಕೈಗೊಂಡು ಇನ್ನು ಮುಂದೆ ತಾಯಿ ಮತ್ತು ಶಿಶು ಮರಣ ಸಂಭವಿಸದಂತೆ ತಡೆಗಟ್ಟುವುದು.

**ಈ.3.9**. ಹೆಣ್ಣು ಭ್ರೂಣಹತ್ಯೆ ತಡೆಗಟ್ಟಲು ತಳಹಂತದ ವಿವಿಧ ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಂಸ್ಥೆಗಳು ಕೈಗೊಂಡಿರುವ ಜನಜಾಗೃತಿ ಕಾರ್ಯಕ್ರಮಗಳನ್ನು ಪರಿಶಿಲಿಸುವುದು ಮತ್ತು ಸೂಕ್ತ ಮಾರ್ಗದರ್ಶನ ನೀಡುವುದು. ಈ ಬಗ್ಗೆ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು ಕೈಗೊಂಡಿರುವ ಕ್ರಮಗಳ ಪರಾಮರ್ಶೆ ಮಾಡುವುದು.

**ಈ.4. ಸಮಿತಿಯ ಸಭೆ:**

**ಈ.4.1**. **"**3 ತಿಂಗಳಿಗೊಮ್ಮೆ**"** ತಿಂಗಳ 3ನೇ ಸೋಮವಾರದ ಅಪರಾಹ್ನ ಜಿಲ್ಲಾ ಪಂಚಾಯತಿ ಸಭಾಂಗಣದಲ್ಲಿ ಸಭೆ ಸೇರತಕ್ಕದ್ದು. ಆ ದಿವಸ ಯಾವುದೇ ಕಾರಣಕ್ಕಾಗಿ ಸಾರ್ವಜನಿಕ ರಜಾ ದಿವಸವಾಗಿದ್ದರೆ ನಂತರದ ದಿವಸದಂದು ಸಭೆ ನಡೆಯತಕ್ಕದ್ದು.

**ಈ.4.2**. 7 ದಿವಸ ಮುಂಚಿತವಾಗಿ ಸಭೆಯಲ್ಲಿ ಚರ್ಚಿಸಬೇಕಿರುವ ವಿಷಯಗಳನ್ನೊಳಗೊಂಡ ಕಾರ್ಯಸೂಚಿಯೊಡನೆ ತಿಳುವಳಿಕೆ ಪತ್ರದ ಮುಖಾಂತರ ಸದಸ್ಯ ಕಾರ್ಯದರ್ಶಿಗಳು ಅಥವಾ ಅವರಿಂದ ಅನುಮತಿಸಲ್ಪಟ್ಟ ಸಹಾಯಕ ಸದಸ್ಯ ಕಾರ್ಯದರ್ಶಿಯವರು ಸಭೆ ಕರೆಯತಕ್ಕದ್ದು. ತುರ್ತು ಸಂದರ್ಭದಲ್ಲಿ ವಿಶೇಷ ಸಭೆಯನ್ನು 24 ಘಂಟೆ ನೋಟೀಸ್ ನೀಡುವ ಮೂಲಕ ಕರೆಯಬಹುದಾಗಿರುತ್ತದೆ.

**ಈ.4.3**. ಸಭೆ ನಡೆಸಲು ಸದಸ್ಯರ ಕೋರಂ ಒಟ್ಟು ಸದಸ್ಯರ ಸಂಖ್ಯೆಯ 1/3 ರಷ್ಟು ಆಗಿರತಕ್ಕದ್ದು. ಹಾಗೂ ಭಾಗವಹಿಸಿದ ಸದಸ್ಯರಲ್ಲಿ ಕನಿಷ್ಟ ಪಕ್ಷ 1/3 ರಷ್ಟು ಮಹಿಳಾ ಸದಸ್ಯರು ಹಾಜರಿರತಕ್ಕದ್ದು.

**ಈ.4.4**. ಸಭೆ ಪ್ರಾರಂಭಿಸಲು ಕೋರಂ ಇರದಿದ್ದರೆ ಸಭೆಯ ಅಧ್ಯಕ್ಷರು 30 ನಿಮಿಷಗಳವರೆಗೆ ಕಾಯತಕ್ಕದ್ದು. ನಂತರದಲ್ಲೂ ಕೋರಂ ಇಲ್ಲದಿದ್ದರೆ ಸಭೆಯನ್ನು ಆ ತಿಂಗಳಲ್ಲೇ ಮುಂದಿನ ಅನುಕೂಲಕರ ದಿನಾಂಕಕ್ಕೆ ಮುಂದೂಡಿ ಹೊಸ ನೋಟೀಸ್ ನೀಡತಕ್ಕದ್ದು.

**ಈ.4.5**. ಸಭೆಯ ದಿನದಂದು ಯಾವುದೇ ಕಾರಣಕ್ಕಾಗಿ ಅಧ್ಯಕ್ಷರು ಗೈರು ಹಾಜರಾಗಿದ್ದರೆ, ಕೋರಂ ಇದ್ದರೆ, ಸಭೆಯಲ್ಲಿರುವ ಸರ್ವಸಮ್ಮತವಾದ ಸದಸ್ಯರಲ್ಲೊಬ್ಬರು ಅಧ್ಯಕ್ಷತೆ ವಹಿಸಿ ಸಭೆ ನಡೆಸ ಬಹುದಾಗಿರುತ್ತದೆ.

**ಈ.4.6**. ಸಭೆಯ ನಡವಳಿಕೆ ಮತ್ತು ನಿರ್ಣಯಗಳನ್ನು ಅಧಿಕೃತ ಪುಸ್ತಕದಲ್ಲಿ ದಾಖಲಿಸಿ ಸದಸ್ಯರ ಸಹಿ ಪಡೆದು ಪ್ರತಿಗಳನ್ನು ಮುಂಬರುವ ಜಿಲ್ಲಾ ಆರೋಗ್ಯ ಅಭಿಯಾನ ಸಮಿತಿಗೆ ಸಲ್ಲಿಸುವ ಹಾಗೂ ದಾಖಲೆಗಳನ್ನು ಸುಸ್ಥಿತಿಯಲ್ಲಿಡುವ ಜವಾಬ್ದಾರಿ ಕಾರ್ಯದರ್ಶಿಯದ್ದಾಗಿರುತ್ತದೆ. ಇದಕ್ಕಾಗಿ ಸಮಿತಿಯ ಸಹ ಕಾರ್ಯದರ್ಶಿಯವರು, ಕಾರ್ಯದರ್ಶಿಯವರಿಗೆ ಸಂಪೂರ್ಣ ಸಹಕಾರ ನೀಡತಕ್ಕದ್ದು.

**ಈ.5. ಖರ್ಚು ವೆಚ್ಚ:** ಸಮಿತಿಯ ಸದಸ್ಯರ ಬಸ್ ಪ್ರಯಾಣ ಕನಿಷ್ಟ ವೆಚ್ಚ ಮತ್ತು ಸಭೆಯ ದಿನದಂದು ಅವಶ್ಯವಿರುವ ಕನಿಷ್ಟ ಸಾದಿಲ್ವಾರು ವೆಚ್ಚವನ್ನು ಜಿಲ್ಲಾ ಆರೋಗ್ಯ ಅಭಿಯಾನದಲ್ಲಿರುವ ನಿರ್ವಹಣಾ ವೆಚ್ಚದಿಂದ ಭರಿಸತಕ್ಕದ್ದು.

**ಈ.6.** ಜಿಲ್ಲಾ ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಕಾರ್ಯಕಾರಿ ಸಮಿತಿ :

**ಈ.6.1.** ರಚನೆ: ಜಿಲ್ಲೆಯ ಜಿಲ್ಲಾ ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಯ ಉಪಸಮಿತಿಯಾಗಿ ಕೆಳಕಂಡಂತೆ ಸದಸ್ಯರನ್ನು ಒಳಗೊಂಡಂತೆ ಕಾರ್ಯಕಾರಿ ಸಮಿತಿ ರಚಿಸತಕ್ಕದ್ದು.

| | | | |
|---|---|---|---|
| 1 | ಜಿಲ್ಲೆಯ ಜಿಲ್ಲಾಧಿಕಾರಿಗಳು | | ಅಧ್ಯಕ್ಷರು |
| 2 | ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿ | | ಸ.ಅಧ್ಯಕ್ಷರು |
| 3 | ಜಿಲ್ಲಾ ಪಂಚಾಯತಿಯ ಆರೋಗ್ಯ ಮತ್ತು ಶಿಕ್ಷಣ ಸ್ಥಾಯಿ ಸಮಿತಿಯ ಅಧ್ಯಕ್ಷರು. | | ಸದಸ್ಯರು |
| 4 | ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಮಹಿಳಾ ಜಿಲ್ಲಾ ಪಂಚಾಯತಿ ಸದಸ್ಯೆ. | | ಸದಸ್ಯರು |
| 5 | ಭಾರತೀಯ ವೈದ್ಯಕೀಯ ಸಂಘ, ಜಿಲ್ಲಾ ಘಟಕದ ಅಧ್ಯಕ್ಷರು | | ಸದಸ್ಯರು |
| 6 | ರೆಡ್ ಕ್ರಾಸ್ ಸಂಸ್ಥೆಯ ಜಿಲ್ಲಾ ಘಟಕದ ಅಧ್ಯಕ್ಷರು | | ಸದಸ್ಯರು |
| 7 | ಜಿಲ್ಲಾ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಉಪ ನಿರ್ದೇಶಕರು. | | ಸದಸ್ಯರು |
| 8 | ಜಿಲ್ಲಾ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರು. | | ಸದಸ್ಯರು |
| 9 | ಜಿಲ್ಲಾ ಶಸ್ತ್ರ ಚಿಕಿತ್ಸಕರು, ಜಿಲ್ಲಾ ಆಸ್ಪತ್ರೆ | | ಸದಸ್ಯರು |
| 10 | ನೋಡಲ್ ಎನ್.ಜಿ.ಓ. ಪ್ರತಿನಿಧಿ | | ಸದಸ್ಯರು |
| 11. | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣಾಧಿಕಾರಿ | | ಸದಸ್ಯ ಕಾರ್ಯದರ್ಶಿ |

**ಈ.6.2. ಉಪಸಮಿತಿಯ ಜವಾಬ್ದಾರಿಗಳು :**

**ಈ.6.2.1.** "ಈ.3" ರಲ್ಲಿ ಜಿಲ್ಲಾ ಆರೋಗ್ಯ ಯೋಜನಾ ಮತ್ತು ಮಾನಿಟರಿಂಗ್ ಸಮಿತಿಗೆ ನೀಡಿರುವ ಎಲ್ಲಾ ಜವಾಬ್ದಾರಿಗಳು ಉಪಸಮಿತಿಗೂ ಅನ್ವಯವಾಗತಕ್ಕದ್ದು.

**ಈ.6.2.2.** ವಿಶೇಷವಾಗಿ ಇತರ ಇಲಾಖೆಗಳೊಂದಿಗೆ ಸಮನ್ವಯತೆ, ಸಂಪನ್ಮೂಲ ಕ್ರೂಢೀಕರಣ ಮತ್ತು ಆರೋಗ್ಯ ಹಾಗೂ ನೈರ್ಮಲ್ಯ ಹಿತದೃಷ್ಠಿಯಿಂದ ಸಂಯೋಜಿತ ಕಾರ್ಯಕ್ರಮಗಳ ಅನುಷ್ಠಾನದ ಬಗ್ಗೆ ಉಪಸಮಿತಿಯು ಕಾರ್ಯಕ್ರಮ ರೂಡಿಸತಕ್ಕದ್ದು.

**ಈ.6.2.3.** ಜಿಲ್ಲೆಯ ವಿವಿಧ ಭಾಗಗಳಲ್ಲಿ ವಾಸವಾಗಿರುವ ಗುಡ್ಡಗಾಡು ಜನರು ಮತ್ತು ಹಿಂದುಳಿದವರಿಗೆ ಅಗತ್ಯ ಸೇವಾ ಸೌಲಭ್ಯ ದೊರಕುವಂತೆ ಯೋಜನೆಗಳನ್ನು ಸಿದ್ಧಪಡಿಸುವುದು ಮತ್ತು ಅನುಷ್ಠಾನಗೊಳಿಸುವುದು ಮತ್ತು ಇದಕ್ಕಾಗಿ ಜಿಲ್ಲೆಯಲ್ಲಿ ಸಕ್ರಿಯರಾಗಿರುವ ಸರ್ಕಾರೇತರ ಆರೋಗ್ಯ ಸಂಸ್ಥೆಗಳ ಸಹಾಯ ಮತ್ತು ಸಹಕಾರವನ್ನು ಪಡೆಯತಕ್ಕದ್ದು.

**ಈ.6.2.4.** ಜಿಲ್ಲೆಯಲ್ಲಿ ಆರೋಗ್ಯ ಮತ್ತು ಸಾಮಾಜಿಕ ಅಭಿವೃದ್ಧಿ ಸೂಚ್ಯಂಕಗಳಾದ ತಾಯಿ ಮರಣ, ಶಿಶು ಮರಣ ಪ್ರಮಾಣ ಮತ್ತು ಒಟ್ಟು ಫಲವತ್ತತೆಯ ಪ್ರಮಾಣದ ದರವನ್ನು ವಾರ್ಷಿಕ ಲೆಕ್ಕ ಮಾಡಿ ಮಿಲೇನಿಯಮ್ ಅಭಿವೃದ್ಧಿ ಸೂಚ್ಯಂಕಗಳನ್ನು ನಿಗಧಿತ ವೇಳೆಗೆ ತಲುಪಲು ಅಗತ್ಯ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳತಕ್ಕದ್ದು.

**ಈ.6.2.5.** ತಾಲ್ಲೂಕು ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಯ, ಉಪಸಮಿತಿಯಾದ "ಕಾರ್ಯಕಾರಿ ಸಮಿತಿ" ಯ ಮೇಲ್ವಿಚಾರಣೆ ಮಾಡತಕ್ಕದ್ದು.

**ಈ.6.3. ಸಮಿತಿಯ ಸಭೆ :**

**ಈ.6.3.1.** ಪ್ರತಿ ತಿಂಗಳು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ನಡೆಯುವ ಜಿಲ್ಲಾ ಆರೋಗ್ಯ ಅಭಿಯಾನದ ಕಾರ್ಯನಿರ್ವಾಹಕ ಸಮಿತಿ, ಸಭೆಯ, ಸಮಯ ಮತ್ತು ದಿನದಂದೇ ಜಿಲ್ಲಾ ಆರೋಗ್ಯ ಯೋಜನೆ ಮತ್ತು ಮಾನಿಟರಿಂಗ್ ಸಮಿತಿಯ ಉಪಸಮಿತಿಯಾದ ಕಾರ್ಯಕಾರಿ ಸಮಿತಿಯ ಸಭೆ ನಡೆಯತಕ್ಕದ್ದು.

**ಈ.6.3.2.** ಕಾರ್ಯಕಾರಿ ಸಮಿತಿ ಮತ್ತು ಕಾರ್ಯನಿರ್ವಾಹಕ ಸಮಿತಿಗಳ ಕಾರ್ಯಸೂಚಿ ಮತ್ತು ನಡಾವಳಿ ಪ್ರತ್ಯೇಕವಾಗಿರತಕ್ಕದ್ದು.

**ಈ.6.3.3.** ಸಭೆಯ ನಡಾವಳಿ ಮತ್ತು ನಿರ್ಣಯಗಳನ್ನು ಅಧಿಕೃತ ಪುಸ್ತಕದಲ್ಲಿ ದಾಖಲಿಸಿ ಸದಸ್ಯರ ಸಹಿ ಪಡೆದು ಪ್ರತಿಗಳನ್ನು ರಾಜ್ಯ ಆರೋಗ್ಯ ಸಂಘಕ್ಕೆ ಮತ್ತು ಅಭಿಯಾನ ನಿರ್ದೇಶಕರಿಗೆ ಸಲ್ಲಿಸುವ ಹಾಗೂ ದಾಖಲೆಗಳನ್ನು ಸುಸ್ಥಿತಿಯಲ್ಲಿಡುವ

ಜವಾಬ್ದಾರಿ ಕಾರ್ಯದರ್ಶಿಯದ್ದಾಗಿರುತ್ತದೆ. ಇದಕ್ಕಾಗಿ ಕಾರ್ಯದರ್ಶಿಯವರು ಜಿಲ್ಲಾ ಎನ್.ಆರ್.ಹೆಚ್.ಎಂ. ವ್ಯವಸ್ಥಾಪಕರ (ಡಿ.ಪಿ.ಎಂ.) ಸಹಾಯ ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಚಿಕ್ಕೇಗೌಡ**

ಪಿ.ಆರ್. 873

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ:** ಸರ್ಕಾರಿ ಸ್ವಾಯತ್ತ ಸಂಸ್ಥೆಗಳಾದ ವೈದ್ಯಕೀಯ ವಿಜ್ಞಾನ ಸಂಸ್ಥೆಗಳಿಗೆ ಹೊಂದಿಕೊಂಡಿರುವ ಬೋಧನಾ ಆಸ್ಪತ್ರೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಯ ಅಧಿಕಾರಿಗಳನ್ನು ಆಯಾ ಸಂಸ್ಥೆಗಳ ಸೇವೆಯಲ್ಲಿ ವಿಲೀನಗೊಳಿಸುವ ಬಗ್ಗೆ.

**ಪ್ರಸ್ತಾವನೆ:**

ಮಂಡ್ಯ, ಹಾಸನ ಮತ್ತು ಬೆಳಗಾಂನಲ್ಲಿ 2006–07ರಲ್ಲಿ ಮತ್ತು ಬೀದರ್, ರಾಯಚೂರು ಮತ್ತು ಶಿವಮೊಗ್ಗದಲ್ಲಿ 2007–08ನೇ ಸಾಲಿನಲ್ಲಿ 6 ವೈದ್ಯಕೀಯ ವಿಜ್ಞಾನ ಸಂಸ್ಥೆಗಳನ್ನು ಸ್ಥಾಪಿಸಲಾಯಿತು. ಇವು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರಡಿ ನೋಂದಾಯಿತ ಸ್ವಾಯತ್ತ ಸಂಸ್ಥೆಗಳಾಗಿರುತ್ತವೆ. ಆಯಾ ಜಿಲ್ಲಾ ಕೇಂದ್ರಗಳಲ್ಲಿದ್ದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಜಿಲ್ಲಾ ಆಸ್ಪತ್ರೆಗಳನ್ನು ಅವು ಹೊಂದಿದ್ದ, ಮೂಲಭೂತ ಸೌಕರ್ಯ, ಕಟ್ಟಡ, ಉಪಕರಣ, ಸಿಬ್ಬಂದಿ ಮತ್ತು ಆಯವ್ಯಯದೊಂದಿಗೆ ವೈದ್ಯಕೀಯ ಶಿಕ್ಷಣ ಇಲಾಖೆಯ ಶೈಕ್ಷಣಿಕ, ಆಡಳಿತಾತ್ಮಕ ಮತ್ತು ಶಿಸ್ತು ನಿಯಂತ್ರಣಕ್ಕೆ ತರಲಾಯಿತು. ಈ ಜಿಲ್ಲಾ ಆಸ್ಪತ್ರೆಗಳನ್ನು ಆಯಾ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ನಿರ್ದೇಶಕರು/ಡೀನ್/ಪ್ರಾಂಶುಪಾಲರ ಶೈಕ್ಷಣಿಕ, ಆಡಳಿತಾತ್ಮಕ ಮತ್ತು ಶಿಸ್ತು ನಿಯಂತ್ರಣದ ಬೋಧನಾ ಆಸ್ಪತ್ರೆಗಳೆಂದು ಕರೆಯಲಾಯಿತು. ಅವುಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಯ ವೈದ್ಯರುಗಳು ಅವರು ಹೊಂದಿದ್ದ ಸ್ನಾತಕ/ಸ್ನಾತಕೋತ್ತರ ಪದವಿಗಳಿಗೆ ಅನುಸಾರವಾಗಿ ಆಯಾಯ ವಿಭಾಗಗಳಲ್ಲಿ ಬೋಧಕ ಸಿಬ್ಬಂದಿಯಾಗಿ ಭಾರತೀಯ ವೈದ್ಯಕೀಯ ಪರಿಷತ್ತಿಗೆ ವಾರ್ಷಿಕ ತಪಾಸಣೆಗಾಗಿ ತೋರಿಸಲಾಯಿತು. ಪ್ರಯುಕ್ತ, ಇವರು ಬೋಧಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ. ಇವರ ಜೊತೆಗೆ ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ ಮತ್ತು ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಯ ಕೆಲವೊಂದು ಅಧಿಕಾರಿಗಳು ನಿಯೋಜನೆಯ ಮೇಲೆ ಬೋಧಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ಬೋಧಕ ಸಿಬ್ಬಂದಿಯ ಕೊರತೆಯನ್ನು ನೀಗಲು ಭಾರತೀಯ ವೈದ್ಯಕೀಯ ಪರಿಷತ್ತಿನ ನಿಯಂತ್ರಣಗಳ ಪ್ರಕಾರ ಬೋಧನಾ ಆಸ್ಪತ್ರೆಗಳಲ್ಲಿ ಬೋಧಕ ಸಿಬ್ಬಂದಿಯಾಗಿ ಕಾರ್ಯ ನಿರ್ವಹಿಸುತ್ತಿರುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಯ ಸ್ನಾತಕೋತ್ತರ ಪದವಿಯನ್ನು ಹೊಂದಿರುವ ತಜ್ಞ ವೈದ್ಯರುಗಳನ್ನು ಆಯಾ ಸಂಸ್ಥೆಗಳ ಸೇವೆಯಲ್ಲಿ ವಿಲೀನಗೊಳಿಸಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 395 ಎಂಎಂಇ 2007, ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2009**

ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೀದರ್ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬೆಳಗಾಂ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ರಾಯಚೂರು ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಶಿವಮೊಗ್ಗ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹಾಸನ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ ಮತ್ತು ಮಂಡ್ಯ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗಳಿಗೆ ಹೊಂದಿಕೊಂಡಿರುವ ಬೋಧನಾ ಆಸ್ಪತ್ರೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಇದಕ್ಕೆ ಲಗತ್ತಿಸಿರುವ ಅನುಬಂಧ–I ರಿಂದ VIII ರವರೆಗೆ ನಮೂದಿಸಿರುವ ತಜ್ಞ ವೈದ್ಯರುಗಳ ಸೇವೆಯನ್ನು ಈ ಕೂಡಲೇ ಜಾರಿಗೆ ಬರುವಂತೆ ಆಯಾ ಸ್ವಾಯತ್ತ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ಸೇವೆಯಲ್ಲಿ ಈ ಕೆಳಗಿನ ಷರತ್ತಿಗಳಿಗೊಳಪಟ್ಟು ವಿಲೀನಗೊಳಿಸಲಾಗಿದೆ.

(1) ತಜ್ಞ ವೈದ್ಯರುಗಳು ಭಾರತೀಯ ವೈದ್ಯಕೀಯ ಪರಿಷತ್ತಿನ ಬೋಧಕ ಸಿಬ್ಬಂದಿಗೆ ವಿದ್ಯಾರ್ಹತೆ ನಿಯಂತ್ರಣಗಳ ಪ್ರಕಾರ, ಸ್ನಾತಕೋತ್ತರ ಪದವಿಯನ್ನು ಹೊಂದಿ ಅರ್ಹರಾಗಿರತಕ್ಕದ್ದು.

(2) ತಜ್ಞ ವೈದ್ಯರುಗಳು ಪರಿವೀಕ್ಷಣಾ ಅವಧಿ/ಸ್ಥಾನಪನ್ನ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರತಕ್ಕದ್ದು.

(3) ಇವರ ವಿರುದ್ಧ ಇಲಾಖಾ ವಿಚಾರಣೆ/ಕ್ರಿಮಿನಲ್ ಮೊಕದ್ದಮೆ ಬಾಕಿ ಇರತಕ್ಕದ್ದಲ್ಲ.

(4) ತಜ್ಞ ವೈದ್ಯರುಗಳು ಸ್ವಾಯತ್ತ ಸಂಸ್ಥೆಗಳ ಸೇವೆಯಲ್ಲಿ ವಿಲೀನಗೊಂಡ ನಂತರ ಮುಂದೆ ಅವರು ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ವಾಪಸ್ ಬರಲು ಆಸ್ಪದ ಇರತಕ್ಕದ್ದಲ್ಲ.

(5) ಸರ್ಕಾರಿ ಇಲಾಖೆಯಿಂದ ಸ್ವಾಯತ್ತ ಸಂಸ್ಥೆಗೆ ವಿಲೀನಗೊಳ್ಳಲು ಸಂಬಂಧಿಸಿದ ನೌಕರರುಗಳು ಒಪ್ಪಿಗೆಯನ್ನು ಬರವಣಿಗೆ ಮೂಲಕ ಸಲ್ಲಿಸಿರತಕ್ಕದ್ದು.

(6) ಸದರಿ ನೌಕರರು ಸರ್ಕಾರದಲ್ಲಿ ಸಲ್ಲಿಸಿದ ಸೇವೆಗೆ ಸಂಬಂಧಿಸಿದಂತೆ ಪ್ರೋರೇಟಾ (Prorata) ಪಿಂಚಣಿ ಬಗ್ಗೆ ಆದೇಶವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು) ಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಸಿಆಸುಇ 524 ಸೇನಿಎ 2008, ದಿನಾಂಕ 22.12.2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಅನೀಸ್ ಸಿರಾಜ್**

ಸರ್ಕಾರದ ಅಪರ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

**Annexure-I to G.O.No.HFW 395 MMC 2007, dated:28-02-2009**

**Bangalore Medical College and Research Institute. Bangalore.**

| Sl No | Name | Designation | Qualification | D.O.B. | Date of Entry into Service |
|---|---|---|---|---|---|
| 1 | Dr. J.B. Shanthala | Sr. Specialist | MD(Mirco) | 25-09-1969 | 22-04-2001 |
| 2 | Dr. Jayachandra | Specialist | MD (GM) | 01-06-1960 | 13-09-1991 |
| 3 | Dr. V. Sreenivas | Specialist | MD(GM) | 29-01-1963 | 01-10-1991 |
| 4 | Dr. R. Manjunath | Specialist | MD(GM) | 01-06-1966 | 09-06-1997 |
| 5 | Dr.Chikkanarasa Reddy, P.S. | Specialist | MD(Pead) | 22-04-1969 | 14-08-1997 |
| 6 | Dr. Gayatridevi C. | Sr. Specialist | MD(Pead) | 02-11-1964 | 28-10-1991 |
| 7 | Dr. Venkatesh Jayadat | Sr. Specialist | MS(GS) | 04-05-1966 | 12-10-1991 |
| 8 | Dr. T. Kemparaju | Sr. Specialist | MS(GS) | 01-10-1965 | 12-07-1991 |
| 9 | Dr. K.L.Venkatesh | Sr. Specialist | MS(GS) | 22-07-1966 | 24-08-1991 |
| 10 | Dr. Somashekar S.A. | Specialist | MS(Ortho) | 12-07-1968 | 09-06-1997 |
| 11 | Dr. K.S. Vedaraju | Sr. Specialist | MD(RD) | 21-07-1969 | 31-08-1998 |
| 12 | Dr. G.M. Puttamadaiah | Specialist | MS(ENT) | 21-07-1969 | 31-08-1998 |
| 13 | Dr.R.K. Datta | Specialist | MS(ENT) | 27-04-1964 | 25-07-1991 |
| 14 | Dr. M.D. Prakash | Specialist | MS(ENT) | 10-06-1969 | 22-07-2000 |
| 15 | Dr. Anil Kumar R. | Specialist | MS(ENT) | 24-05-1970 | 18-08-1997 |
| 16 | Dr.N. Bharati | Sr. Specialist | MS(Optha) | 23-09-1964 | 23-09-1988 |
| 17 | Dr. Kalpana S. | Sr. Specialist | MS(optha) | 14-05-1957 | 21-02-1985 |
| 18 | Dr. K. Srinivas | Sr. Specialist | MS(OBG) | 30-04-1966 | 29-07-1991 |
| 19 | Dr. Asok Kumar Devoor | Sr. Specialist | MS(OBG) | 02-09-1971 | 18-08-1997 |
| 20 | Dr. Jaganath Pairu, | Specialist | MD(OBG) | 15-10-1968 | 14-081997 |
| 21 | Dr. Vijayalakshmi M. Nayak | Specialist | MD (OBG) | 10-06-1969 | 22-07-2000 |
| 22 | Dr. Ramesh R | Sr. Specialist | M.D.(Anes) | 21-01-1965 | 09-10-1991 |
| 23 | Dr. J. Vasanth Kumar | Sr. Specialist | MD(Anes) | 03-07-1964 | 02-10-1991 |
| 24 | Dr. Sateesh M. | Sr. Specialist | MD (Anes) | 18-04-1965 | 12-09-1991 |
| 25 | Dr. Diwkar T.N. | Sr. Specialist | MD(GM) | 05-01-1969 | 09-06-1997 |
| 26 | Dr. Kavya S.T. | Sr. Specialist | MD(GM) | 28-08-1966 | 27-07-1991 |
| 27 | Dr. Sudha H.C. | Sr. Specialist | MD(OBG) | 06-11-1967 | 18-09-1997 |

**S. ANEES SIRAJ**

Additional Secretary to Government,

Health and Family Welfare Department, (Medical Education)

**Annexure-II to G.O.No.HFW 395 MMC 2007, dated:28-02-2009**

**Mysore Medical College and Research Institute. Mysore.**

| Sl No | Name | Designation | Qualification | D.O.B. | Date of Entry into Service |
|---|---|---|---|---|---|
| 1 | Dr. M.N. Gayathri | Sr. Specialist | MD(Path) | 04-12-1967 | 09-06-1997 |
| 2 | Dr. M.M. Basavaraju | Sr. Specialist | MD(GM) | 20-05-1964 | 11-11-1987 |
| 3 | Dr. Rangaswamy | Sr. Specialist | MD (GM) | 12-03-1965 | 25-07-1991 |
| 4 | Dr. Manjunath | Sr. Specialist | MD(Paed) | 24-05-1959 | 31-10-1987 |
| 5 | Dr. Rajendrakumar | Sr. Specialist | MD(Paed) | 11-12-1964 | 11-11-1993 |
| 6 | Dr.P.S. Marudesh | Sr. Specialist | MS(ENT) | 23-05-1960 | 09-06-1997 |
| 7 | Dr. C. Subhash | Sr. Specialist | MS(ENT | 26-01-1967 | 09-06-1997 |
| 8 | Dr. G.M. Ravikumar | Sr. Specialist | MS(GS) | 27-11-1960 | 28-02-1985 |
| 9 | Dr.K.S.Balasubramanyam | Sr. Specialist | MS(GS) | 04-04-1958 | 23-02-1985 |
| 10 | Dr. B.S. Madhu | Sr. Specialist | MS(GS) | 12-07-1966 | 25-07-1991 |
| 11 | Dr. B.N. Anandaravi | Sr. Specialist | MS(GS) | 30-06-1965 | 23-07-1991 |
| 12 | Dr. H.S. Prakash | Specialist | MS(GS) | 02-05-1972 | 05-09-2002 |
| 13 | Dr.S. Chandrashekar | Specialist | MS(GS) | 14-02-1967 | 09-06-1997 |
| 14 | Dr. H. Bangaru | Sr. Specialist | MD(Skin &STD) | 05-01-1966 | 18-08-1997 |
| 15 | Dr. K.A.K. Surendran | Sr. Specialist | MD(Skin &STD) | 22-12-1963 | 05-10-1999 |
| 16 | Dr.S.H. Bellad | Sr. Specialist | MS(Ortho) | 20-05-1959 | 19-09-1985 |
| 17 | Dr. R. Krishnapasad | Sr. Specialist | MD(TB&CD | 27-07-1952 | 10-09-1987 |
| 18 | Dr. N.Ravi | Sr. Specialist | MD(FM) | 24-03-1968 | 09-06-1997 |
| 19 | Dr. B.C. Vijayalakshmi | Sr. Specialist | MD(Anaes) | 27-02-1971 | 10-05-2008 |
| 20 | Dr. G. Rajalakshmi | Sr. Specialist | MS(GS) | 05-01-1967 | 13-08-1997 |

**S. ANEES SIRAJ**
Additional Secretary to Government,
Health and Family Welfare Department, (Medical Education)

**Annexure-III to G.O.No.HFW 395 MMC 2007, dated:28-02-2009**

**Bidar Institute of Medical Sciences, Bidar**

| Sl No | Name | Designation | Qualification | D.O.B. | Date of Entry into Service |
|---|---|---|---|---|---|
| 1 | Dr. Kashinath B.K. | Dist Surgeon | MD(GM) | 01-06-1957 | 27-02-1985 |
| 2 | Dr. Vaijinath Tugave | Sr. Specialist | MS(GS) | 06-08-1952 | 06-11-1980 |
| 3 | Dr. S.R. Hanumshetty | Sr. Specialist | MD (GM) | 05-11-1952 | 10-10-1991 |
| 4 | Dr. Asha Hanumshetty | Sr. Specialist | MD(OBG) | 11-08-1959 | 11-11-1991 |
| 5 | Dr. Ashok Kumar Nagure | Specialist | MD (Skin & VD) | 04-05-1970 | 05-09-2002 |
| 6 | Dr. Rajashekar Patil | Sr. Specialist | MD (Md) | 25-08-1959 | 22-02-1985 |
| 7 | Dr. Madana Vaijinath | Sr. Specialist | MS(GS) | 15-08-1955 | 01-03-1985 |
| 8 | Dr. M. Mazharul Haque | Sr. Specialist | MD(Anes) ) | 04-09-1958 | 28-02-1985 |
| 9 | Dr. Jayshree | Specialist | MD(OBG) | 23-03-1969 | 06-08-1997 |

| Sl No | Name | Designation | Qualification | D.O.B. | Date of Entry into Service |
|---|---|---|---|---|---|
| 10 | Dr. Math N. Siddaiah | Chief Dental Health Officer | MDS | 03-07-1954 | 22-06-1984 |
| 11 | Dr. Saritha M. Hattargi | Sr. Specialist | MD(OBG) | 20-05-1965 | 04-12-1991 |
| 12 | Dr.Anilkumar H.Talavadi | Specialist | MS (GS) | 22-07-1967 | 21-08-1992 |
| 13 | Dr. Gowrishankar D | Specialist | MS(Ortho) | 02-02-1962 | 10-11-1987 |

**S. ANEES SIRAJ**
Additional Secretary to Government,
Health and Family Welfare Department, (Medical Education)

**Annexure-IV to G.O.No.HFW 395 MMC 2007, dated:28-02-2009**
**Belgaum Institute of Medical Sciences, Belgaum,**

| Sl No | Name | Designation | Qualification | D.O.B. | Date of Entry into Service |
|---|---|---|---|---|---|
| 1 | Dr. Asok. Murugod | Sr. Specialist | MS | 08-02-1955 | 21-10-1982 |
| 2 | Dr. R.R, Walwekar | Sr. Specialist | MD (GM) | 23-01-1955 | 15-02-1985 |
| 3 | Dr. Giridara Patil | Sr. Specialist | MD(GM) | 02-02-1964 | 30-10-1987 |
| 4 | Dr. S.S. Karlatti | Sr. Specialist | MS(GS) | 25-08-1958 | 14-08-1986 |
| 5 | Dr. P.S. Aralikatti | Sr. Specialist | MS(GS) | 21-04-1953 | 30-10-1980 |
| 6 | Dr. S.N. Satihala | Sr. Specialist | MS(GS) | 01-08-1964 | 29-09-1991 |
| 7 | Dr. Rajashree kadakola | Sr. Specialist | MD(DGO) | 16-08-1956 | 01-10-1983 |
| 8 | Dr. Champa kappada | Sr. Specialist | MD(DGO) | 04-06-1958 | 23-03-1985 |
| 9 | Dr. Uma R.B. | Sr. Specialist | MD (Anaes) | 22-05-1962 | 28-10-1987 |
| 10 | Dr. Navalagunda Surekha | Specialist | MS(opth) | 04-04-1961 | 09-06-1991 |
| 11 | Dr. S.M.Ganagi | Sr. Specialist | MS(opth) | 26-03-1952 | 25-12-1982 |
| 12 | Dr. Shailaja Hugara | Sr. Specialist | MS(Optha) | 01-03-1963 | 23-11-1991 |
| 13 | Dr. Umadevi S. Angadi | Specialist | MS(ENT) | 21-05-1962 | 04-11-1987 |
| 14 | Dr. G.V.Doddavada | Sr. Specialist | MS(ENT) | 01-06-1951 | 02-11-1980 |
| 15 | Dr. Jayashree Nayak | Sr. Specialist | MD(Skin) | 13-07-1959 | 01-03-1985 |
| 16 | Dr. Eranna Palleda | Specialist | MD(DMRD) | 29-11-1971 | 18-08-1997 |
| 17 | Dr. Chandrashekar T.R. | Sr. Specialist | MD(Psy) | 17-12-1965 | 24-07-1997 |
| 18 | Dr. Girija C. Bellada | Sr. Specialist | MD(OBG) | 30-06-1958 | 07-08-1986 |
| 19 | Dr. Jnaneshwar K.B. | Specialist | MD(Mircor) | 30-04-1975 | 23-04-2001 |

**S. ANEES SIRAJ**
Additional Secretary to Government,
Health and Family Welfare Department, (Medical Education)

**Annexure-V to G.O.No.HFW 395 MMC 2007, dated:28-02-2009**
**Raichur Institute of Medical Sciences, Raichur,**

| Sl No | Name | Designation | Qualification | D.O.B. | Date of Entry into Service |
|---|---|---|---|---|---|
| 1 | Dr. T.M. Nataraja | Dist Surgeon | MS(Ortho) | 15-04-1951 | 03-11-1980 |

| Sl No | Name | Designation | Qualification | D.O.B. | Date of Entry into Service |
|---|---|---|---|---|---|
| 2 | Dr. H. Shivanagamma | Sr. Specialist | MD(OBG) | 01-01-1952 | 17-11-1989 |
| 3 | Dr. Shobha Nayaka | Sr. Specialist | MS (Surgery) | 02-02-1952 | 31-10-1985 |
| 4 | Dr. G. Amarappa | Sr. Specialist | MD(Anes) | 24-09-1951 | 01-03-1985 |
| 5 | Dr. Jagjeevanram | Sr. Specialist | MS(GS) | 15-03-1954 | 23-01-1984 |
| 6 | Dr. Pujari Sadananda | Sr. Specialist | MS(Opth) | 09-04-1962 | 13-11-1987 |
| 7 | Dr. Prabhuraj gaddigeri | Sr. Specialist | MS(GS) | 01-07-1962 | 29-12-1987 |
| 8 | Dr. Abdul Kaleem Siddique | Sr. Specialist | MD(Anes) | 12-08-1963 | 11-01-1987 |
| 9 | Dr. Rajashekhar | Sr. Specialist | MD(Medicine) | 01-06-1967 | 09-06-1997 |
| 10 | Dr. Shankarappa M. Mudagal | Sr. Specialist | MD(Medicine) | 01-06-1957 | 01-09-1988 |

**S. ANEES SIRAJ**

Additional Secretary to Government, Health and Family Welfare Department, (Medical Education)

**Annexure-VI to G.O.No.HFW 395 MMC 2007, dated:28-02-2009**

**Shimoga Institute of Medical Sciences, Shimoga,**

| Sl No | Name | Designation | Qualification | D.O.B. | Date of Entry into Service |
|---|---|---|---|---|---|
| 1 | Dr. Nanda S. Shinge | Dist Surgeon | MS(DGO) | 01-06-1953 | 06-09-1980 |
| 2 | Dr. H.Nagaraja | Sr. Specialist | MS(GS) | 15-03-1955 | 01-03-1985 |
| 3 | Dr. T.M. Shashidar | Sr. Specialist | MS (GS) | 21-02-1956 | 15-07-1982 |
| 4 | Dr. R.N. Raikar | Sr. Specialist | MS(GS) | 17-07-1957 | 11-11-1987 |
| 5 | Dr. A. Madhusudan | Sr. Specialist | MS(GS) | 20-04-1960 | 02-08-1986 |
| 6 | Dr. S. K. Mahendrappa | Sr. Specialist | MD(GM) | 10-10-1954 | 25-10-1982 |
| 7 | Dr. K.C. Shekharappa | Sr. Specialist | MD(GM) | 05-04-1954 | 23-01-1984 |
| 8 | Dr. T.B. Sathyanarayana | Sr. Specialist | MD(GM) | 08-12-1958 | 29-07-1991 |
| 9 | Dr.K.Chandrashekarappa | Sr. Specialist | MD(Anes) | 12-10-1954 | 11-09-1981 |
| 10 | Dr. K.N. Gurudath | Sr. Specialist | MD(Anes) | 14-07-1961 | 01-08-1986 |
| 11 | Dr. C.G. Ravindra | Sr. Specialist | MD(Anes) | 19-07-1958 | 02-08-1986 |
| 12 | Dr. P. Shivananda | Specialist | MD(Anes) | 01-06-1965 | 01-08-1986 |
| 13 | Dr. R. Manjunatha swamy | Specialist | MD (Pead) | 11-05-1962 | 01-09-1988 |
| 14 | Dr. J. Rathnamma | Sr. Specialist | MS(Opth) | 25-12-1952 | 08-08-1980 |
| 15 | Dr. H.D. Veeranna | Sr. Specialist | MS(Ortho) | 01-02-1956 | 28-02-1985 |
| 16 | Dr. P.R. Sudheendra | Specialist | MS(Ortho) | 14-07-1968 | 13-08-1997 |
| 17 | Dr. D. Vimalabaye | Sr. Specialist | MD(DGO) | 08-03-1951 | 06-02-1978 |
| 18 | Dr. B.T. Subramanya | Sr. Specialist | MS(ENT) | 10-04-1952 | 21-01-1984 |
| 19 | Dr. Ramesh S. | Sr. Specialist | MS(ENT) | 24-08-1965 | 01-10-1991 |
| 20 | Dr. M. Manjunath | Sr. Specialist | MD(DVD) | 15-05-1965 | 15-07-1991 |
| 21 | Dr. Ramprasad K.S. | Sr. Specialist | MD(Psy) | 15-09-1970 | 11-08-1997 |
| 22 | Dr. Mallikarjuna | Sr. Specialist | MDRD | 01-06-1955 | 07-08-1986 |
| 23 | Dr. M. Nagaraj | Sr. Specialist | MS(ENT) | 15-06-1964 | 05-10-1991 |

**S. ANEES SIRAJ**

Additional Secretary to Government, Health and Family Welfare Department, (Medical Education)

**Annexure-VII to G.O.No.HFW 395 MMC 2007, dated:28-02-2009**

**Hassan Institute of Medical Sciences, Hassan,**

| Sl No | Name | Designation | Qualification | D.O.B. | Date of Entry into Service |
|---|---|---|---|---|---|
| 1 | Dr. Prem Kumar | Dist Surgeon | MD (GM) | 01-06-1956 | 04-02-1984 |
| 2 | Dr. H.R. Krishnegowda | Sr. Specialist | MD (GM) | 10-06-1953 | 26-09-1980 |
| 3 | Dr. K. Shankar | Sr. Specialist | MS(Ortho) | 15-05-1959 | 01-08-1986 |
| 4 | Dr. N. Sriranga | Specialist | MS(Ortho) | 18-01-1973 | 01-03-2004 |
| 5 | Dr. V. Krishna Murthy | Sr. Specialist | MS(GS) | 15-09-1964 | 10-10-1991 |
| 6 | Dr. Nirmala Doreswamy | Sr. Specialist | MD(DGO) | 27-09-1963 | 17-07-1991 |
| 7 | Dr.H. Kumar Naiyak. | Sr. Specialist | MD(Path) | 05-07-1958 | 16-06-1993 |
| 8 | Dr. G.D. Eswara Prasad | Specialist | MS(GS) | 17-07-1971 | 31-07-2000 |
| 9 | Dr. T.K. Shivakumar | Specialist | MD(FM) | 01-03-1965 | 08-08-1997 |
| 10 | Dr. D.A. Vishalakshi | Sr. Specialist | MD(DGO) | 19-07-1967 | 04-11-1992 |
| 11 | Dr. K.N. Sumithra | Specialist | MD (DGO) | 01-11-1974 | 23-07-2000 |
| 12 | Dr. B. Mallikarjunappa | Sr. Specialist | MD(RD) | 01-06-1955 | 07-08-1986 |
| 13 | Dr. Shivakumar Swamy Udasimath | Sr. Specialist | MD(Path) | 01-03-1973 | 19-07-2000 |

**S. ANEES SIRAJ**
Additional Secretary to Government,
Health and Family Welfare Department, (Medical Education)

**Annexure-VIII to G.O.No.HFW 395 MMC 2007, dated:28-02-2009**

**Mandya Institute of Medical Sciences, Mandya**

| Sl No | Name | Designation | Qualification | D.O.B. | Date of Entry into Service |
|---|---|---|---|---|---|
| 1 | Dr. Ramalingegowda | Dist Surgeon & Sr. Specialist | MS (ENT) | 05-12-1953 | 12-11-1979 |
| 2 | Dr. Chandreagowda | Sr. Specialist | MD (Medicine) | 01-06-1966 | 07-08-1997 |
| 3 | Dr. Manchaiah | Sr. Specialist | MD(Medicine) | 18-03-1951 | 23-01-1984 |
| 4 | Dr. K.A. Rajashekhar | Sr. Specialist | MS(Surgery ) | 27-11-1960 | 15-07-1991 |
| 5 | Dr. Puttaswamy | Sr. Specialist | MD(FM) | 17-02-1963 | 13-08-1997 |
| 6 | Dr. Gopalakrishna K.H. | Sr. Specialist | MS(Surgery) | 19-06-1964 | 29-08-1991 |
| 7 | Dr. Pandrinath A. | Sr. Specialist | MS(Ortho) | 16-03-1957 | 01-08-1986 |
| 8 | Dr. Puttaswamy Gowda A.B. | Sr. Specialist | MS(Ortho) | 04-06-1952 | 21-01-1984 |
| 9 | Dr. Srinivas S. | Sr. Specialist | MS | 22-06-1958 | 05-01-1988 |

**S. ANEES SIRAJ**
Additional Secretary to Government,
Health and Family Welfare Department, (Medical Education)

P.R. 874

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿ ತಾತ್ಕಾಲಿಕವಾಗಿ ಮುಂದುವರಿಯುತ್ತಿರುವ ತಾಂತ್ರಿಕ ಹುದ್ದೆಗಳನ್ನು ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ತಾತ್ಕಾಲಿಕವಾಗಿ ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಡಿಪಿಎಆರ್ 470 ಎಸ್‌ಜಿಒ 82 ದಿನಾಂಕ:01.09.1982.
2. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 33 ಸಸಿವಿ 96 ದಿನಾಂಕ:24.02.1998.
3. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 1 ಸಸಿವಿ 99 ದಿನಾಂಕ:23.04.2001.
4. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 40 ಸಸಿವಿ 01 ದಿನಾಂಕ:19.11.2001.
5. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 89 ಸಸಿವಿ 05 ದಿನಾಂಕ:13.01.2006.
6. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 101 ಸಸಿವಿ 06 ದಿನಾಂಕ:18.01.2007.
7. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 33 ಸಅಸೇ 08 ದಿನಾಂಕ:11.06.2008.
8. ಅನಧಿಕೃತ ಟಿಪ್ಪಣಿ ಸಂಖ್ಯೆ:ಜಸಂಇ 127 ಎಂಎಂಕೆ 06 ದಿನಾಂಕ:24.12.2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಜಲಸಂಪನ್ಮೂಲ ಇಲಾಖೆಯ ತಾಂತ್ರಿಕ ಶಾಖೆಗಳಲ್ಲಿ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದ್ದು, ಸದರಿ ಹುದ್ದೆಗಳನ್ನು ಮೇಲೆ ಓದಲಾದ ಕ್ರಮ ಸಂಖ್ಯೆ: 2 ರಿಂದ 7 ರವರೆಗಿನ ಆದೇಶಗಳಲ್ಲಿ ಕಾಲಕಾಲಕ್ಕೆ ಮುಂದುವರಿಸಲಾಗಿದೆ. ಮೇಲೆ (7) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ದಿನಾಂಕ:31.12.2008 ರವರೆಗೆ ಮುಂದುವರಿಸಲಾಗಿದ್ದು, ಸದರಿ ಹುದ್ದೆಗಳನ್ನು ದಿನಾಂಕ: 1.1.2009 ರಿಂದ ಮುಂದುವರಿಸುವಂತೆ ಮೇಲೆ (8) ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಜಲಸಂಪನ್ಮೂಲ ಇಲಾಖೆಯು ಕೋರಿದೆ. ಅದರಂತೆ ಸರ್ಕಾರವು ಪರಿಶೀಲಿಸಿ ಈ ಮುಂದಿನಂತೆ ಆದೇಶಿಸುತ್ತದೆ.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1) | 1) ಸರ್ಕಾರದ ಉಪಕಾರ್ಯದರ್ಶಿ (ಬೃಹತ್ ಮತ್ತು ಮಧ್ಯಮ ಯೋಜನೆಗಳು) ಜಲಸಂಪನ್ಮೂಲ ಇಲಾಖೆ | 1 |
| | 2) ಶೀಘ್ರಲಿಪಿಗಾರ | 1 |
| | 3) ಕಿರಿಯ ಸಹಾಯಕ | 1 |
| | 4) ದಲಾಯತ್ | 1 |
| | **ಒಟ್ಟು** | **4** |
| 2) | **ಮಧ್ಯಮ ಮತ್ತು ಭಾರಿ ನೀರಾವರಿ ಶಾಖೆ–3**<br>1) ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) | 1 |
| | 2) ಶಾಖಾಧಿಕಾರಿ | 1 |
| | 3) ಹಿರಿಯ ಸಹಾಯಕರು | 2 |
| | 4) ಸಹಾಯಕರು | 1 |
| | 5) ಶೀಘ್ರಲಿಪಿಗಾರ | 1 |
| | 6) ಕಿರಿಯ ಸಹಾಯಕ | 1 |
| | 7) ಬೆರಳಚ್ಚುಗಾರ | 1 |
| | 8) ದಲಾಯತ್ | 1 |
| | **ಒಟ್ಟು** | **9** |
| 3) | **ವಿಶ್ವಬ್ಯಾಂಕ್ ಶಾಖೆ**<br>1) ಸರ್ಕಾರದ ಅಧೀನ ಕಾರ್ಯದರ್ಶಿ (ವಿಶ್ವಬ್ಯಾಂಕ್) | 1 |
| | 2) ಶಾಖಾಧಿಕಾರಿ | 1 |
| | 3) ಹಿರಿಯ ಸಹಾಯಕ | 1 |
| | 4) ಸಹಾಯಕ | 1 |
| | 5) ಶೀಘ್ರಲಿಪಿಗಾರ | 1 |

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| | 6) ಕಿರಿಯ ಸಹಾಯಕ | 1 |
| | 7) ಬೆರಳಚ್ಚುಗಾರ | 1 |
| | 8) ದಲಾಯತ್ | 1 |
| | **ಒಟ್ಟು** | **8** |

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 33 ಸಅಸೇ 2008, ಬೆಂಗಳೂರು, ದಿನಾಂಕ: 3ನೇ ಫೆಬ್ರವರಿ 2009**

ಕರ್ನಟಕ ಸರ್ಕಾರ ಸಚಿವಾಲಯದ ಜಲಸಂಪನ್ಮೂಲ ಇಲಾಖೆಯಲ್ಲಿ ತಾತ್ಕಾಲಿಕವಾಗಿ ಮುಂದುವರಿಯುತ್ತಿರುವ ಈ ಕೆಳಕಂಡ ತಾಂತ್ರಿಕ ಹುದ್ದೆಗಳನ್ನು ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ; 01.01.2009 ರಿಂದ 31.12.2009 ರವರೆಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1) | 1) ಸರ್ಕಾರದ ಉಪಕಾರ್ಯದರ್ಶಿ (ಬೃಹತ್ ಮತ್ತು ಮಧ್ಯಮ ಯೋಜನೆಗಳು) ಜಲಸಂಪನ್ಮೂಲ ಇಲಾಖೆ | 1 |
| | 2) ಶೀಘ್ರಲಿಪಿಗಾರ | 1 |
| | 3) ಕಿರಿಯ ಸಹಾಯಕ | 1 |
| | 4) ದಲಾಯತ್ | 1 |
| | **ಒಟ್ಟು** | **4** |
| 2) | **ಮಧ್ಯಮ ಮತ್ತು ಭಾರಿ ನೀರಾವರಿ ಶಾಖೆ–3**<br>1) ವಿಶೇಷ ಕರ್ತವ್ಯಾಧಿಕಾರಿ (ತಾಂತ್ರಿಕ) | 1 |
| | 2) ಶಾಖಾಧಿಕಾರಿ | 1 |
| | 3) ಹಿರಿಯ ಸಹಾಯಕರು | 2 |
| | 4) ಸಹಾಯಕರು | 1 |
| | 5) ಶೀಘ್ರಲಿಪಿಗಾರ | 1 |
| | 6) ಕಿರಿಯ ಸಹಾಯಕ | 1 |
| | 7) ಬೆರಳಚ್ಚುಗಾರ | 1 |
| | 8) ದಲಾಯತ್ | 1 |
| | **ಒಟ್ಟು** | **9** |
| 3) | **ವಿಶ್ವಬ್ಯಾಂಕ್ ಶಾಖೆ**<br>1) ಸರ್ಕಾರದ ಅಧೀನ ಕಾರ್ಯದರ್ಶಿ (ವಿಶ್ವಬ್ಯಾಂಕ್) | 1 |
| | 2) ಶಾಖಾಧಿಕಾರಿ | 1 |
| | 3) ಹಿರಿಯ ಸಹಾಯಕ | 1 |
| | 4) ಸಹಾಯಕ | 1 |
| | 5) ಶೀಘ್ರಲಿಪಿಗಾರ | 1 |
| | 6) ಕಿರಿಯ ಸಹಾಯಕ | 1 |
| | 7) ಬೆರಳಚ್ಚುಗಾರ | 1 |
| | 8) ದಲಾಯತ್ | 1 |
| | **ಒಟ್ಟು** | **8** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10.07.1996ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಶಿವರಾಮ್**

ಪಿ.ಆರ್. 517

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3).

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ:** ಬಾಗಲಕೋಟೆ ಜಿಲ್ಲೆಯ ಬೀಳಗಿ ಕಂದಾಯ ತಾಲ್ಲೂಕಿಗೆ ನೋಟರಿ ಹುದ್ದೆ ಭರ್ತಿ ಮಾಡುವ ಕುರಿತು – (ಶ್ರೀ ಬಿ.ಎಸ್. ನಾಗನಗೌಡರ್, ನೋಟರಿ, ಬೀಳಗಿ ಇವರ ನಿಧನದಿಂದ ತೆರವಾದ)

**ಓದಲಾಗಿದೆ:**
1. ಸರ್ಕಾರಿ ಪತ್ರ ಸಂಖ್ಯೆ ಲಾ 11 ಎಲ್‌ಸಿಎಲ್ 07, ದಿನಾಂಕ: 16.01.2008.
2. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ಇವರ ಪತ್ರ ಸಂಖ್ಯೆ ಆಡಳಿತ/1371/08 ದಿನಾಂಕ: 18.03.2008 ಮತ್ತು 29.05.2008.
3. ಸರ್ಕಾರಿ ಪತ್ರ ಸಂಖ್ಯೆ ಲಾ 59 ಎಲ್‌ಸಿಎಲ್ 08, ದಿನಾಂಕ: 17.06.2008.
4. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ಇವರ ಪತ್ರ ಸಂಖ್ಯೆ 3480/08 ದಿನಾಂಕ: 11.08.2008.
5. ಸರ್ಕಾರಿ ಪತ್ರ ಸಂಖ್ಯೆ ಲಾ 59 ಎಲ್‌ಸಿಎಲ್ 08, ದಿನಾಂಕ: 19.09.2008 ಮತ್ತು 25.11.2008.
6. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ಇವರ ಪತ್ರ ಸಂಖ್ಯೆ 5040/08 ದಿನಾಂಕ: 05.12.2008.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 16.01.2008ರ ಸರ್ಕಾರಿ ಪತ್ರದಲ್ಲಿ ಶ್ರೀ ಬಿ.ಎಸ್. ನಾಗನಗೌಡರ್, ನೋಟರಿ, ಬೀಳಗಿ ಇವರ ತಪಾಸಣಾ ವರದಿಯನ್ನು ಇದುವರೆವಿಗೂ ಸಲ್ಲಿಸಿರುವುದಿಲ್ಲವಾದ್ದರಿಂದ ಕೂಡಲೇ ತಪಾಸಣಾ ವರದಿಯನ್ನು ಕಳುಹಿಸಿಕೊಡುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ಇವರನ್ನು ಕೋರಲಾಗಿತ್ತು. ಅದಕ್ಕೆ ಮೇಲೆ (2) ರಲ್ಲಿ ಓದಲಾದ ದಿನಾಂಕ: 18.03.2008 ಮತ್ತು 29.05.2008ರ ಪತ್ರಗಳಲ್ಲಿ ಶ್ರೀ ಬಿ.ಎಸ್. ನಾಗನಗೌಡರ್, ನೋಟರಿ, ಬೀಳಗಿ ಇವರು ದಿನಾಂಕ: 14.04.2007 ರಂದು ನಿಧನರಾಗಿರುವುದಾಗಿ ದೃಢೀಕೃತ ಮರಣ ಪ್ರಮಾಣ ಪತ್ರದೊಂದಿಗೆ ಸದರಿ ಹುದ್ದೆ ಭರ್ತಿ ಮಾಡುವ ಅಗತ್ಯವಿರುವುದಾಗಿ ವರದಿ ಮಾಡಿದ್ದರು.

ಅದರಂತೆ ಮೇಲೆ (3)ರಲ್ಲಿ ಓದಲಾದ ದಿನಾಂಕ: 17.06.2008ರ ಸರ್ಕಾರಿ ಪತ್ರದಲ್ಲಿ ಸದರಿ ನೋಟರಿ ಖಾಲಿ ಜಾಗವನ್ನು ತುಂಬಲು ನೋಟರಿ ನಿಯಮಾವಳಿಗಳ ಪ್ರಕಾರ ಪರಿಶೀಲಿಸಿ ಸೂಕ್ತ ಪ್ರಸ್ತಾವನೆಯನ್ನು ಸಲ್ಲಿಸುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ಜಿಲ್ಲೆ ಇವರನ್ನು ಕೋರಲಾಗಿತ್ತು.

ಆ ಮೇರೆಗೆ ಮೇಲೆ (4)ರಲ್ಲಿ ಓದಲಾದ ದಿನಾಂಕ 11.08.2008ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ಜಿಲ್ಲೆ ಇವರು 03 ಜನರ ಮನವಿಗಳನ್ನೊಳಗೊಂಡ ಪ್ರಸ್ತಾವನೆಯನ್ನು ಸಲ್ಲಿಸಿದ್ದರು. ಆದರೆ, ಸದರಿ ಮನವಿಗಳಿಗೆ ಸಂಬಂಧಿಸಿದಂತೆ, ನೋಟರಿ ನಿಯಮ 6(2) ಮತ್ತು 7(3)ರನ್ವಯ ಪರಿಶೀಲನಾ ವರದಿ ಸಲ್ಲಿಸಿರಲಿಲ್ಲವಾದ್ದರಿಂದ, ಅವುಗಳನ್ನು ಹಿಂದಿರುಗಿಸಿ ಸದರಿ ಮಾಹಿತಿಯೊಂದಿಗೆ ಸಲ್ಲಿಸುವಂತೆ ಮೇಲೆ (5)ರಲ್ಲಿ ಓದಲಾದ ಪತ್ರಗಳಲ್ಲಿ ಕೋರಲಾಗಿತ್ತು.

ಮೇಲೆ (6)ರಲ್ಲಿ ಓದಲಾದ ದಿನಾಂಕ: 11.08.2008ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟೆ ಜಿಲ್ಲೆ ಇವರು ಪರಿಶೀಲನಾ ವರದಿಯೊಂದಿಗೆ ಸದರಿ ಮೂರು ಜನರ ಮನವಿಗಳನ್ನು ಸಲ್ಲಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲನೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ. ಲಾ 59 ಎಲ್‌ಸಿಎಲ್ 2008, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2009.**

ನೋಟರಿ ಅಧಿನಿಯಮ 1952 ಹಾಗೂ ನೋಟರಿ ನಿಯಮಗಳು (1956)ರ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ಶ್ರೀ ರೇವಣಯ್ಯ ಎಸ್. ನಿಂಗೊಳ್ಳಿ, ವಕೀಲರು, ಗಾಂಧಿನಗರ, ಬೀಳಗಿ, ಬಾಗಲಕೋಟೆ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಬೀಳಗಿ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು, ನಿಯಮಾನುಸಾರ ನಿಗಧಿಪಡಿಸಲಾದ ರೂ.1000/– (ರೂಪಾಯಿ ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಸರ್ಕಾರಿ ಖಜಾನೆಯಲ್ಲಿ ಲೆಕ್ಕ ಶೀರ್ಷಿಕೆ 0070–ಇತರೆ–ಆಡಳಿತಾತ್ಮಕ–ಸೇವೆಗಳು–01–ನ್ಯಾಯ ಪರಿಪಾಲನೆ–501–0–ಇತರೆ ಸ್ವೀಕೃತಿಗಳು–06–ಇತರೆ ಬಾಬುಗಳಿಗೆ (0070–01–501–0–06) ಜಮಾ ಮಾಡಿ, ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ವೃತ್ತಿ ಪ್ರಮಾಣ ಪತ್ರವನ್ನು ನೀಡಲಾಗುವುದು. ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ 1952ರನ್ವಯ ಸರ್ಕಾರ ನಿರ್ವಹಿಸುತ್ತಿರುವ ಪಟ್ಟಿಯಲ್ಲಿ ನಮೂದಿಸಲಾಗುವುದು. ಈ ಸಂಬಂಧದ ವೆಚ್ಚವನ್ನು ವಕೀಲರೆ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ಶಕುಂತಲ**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. 724